KA / BG-GPO / 2515 / WPP-47 / 2009-2011


# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮಾರ್ಚ್ ೩೧, ೨೦೧೧, (ಚೈತ್ರ ೧೦, ಶಕ ವರ್ಷ ೧೯೩೩) | ಸಂಚಿಕೆ ೧೩ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### HOME SECRETARIAT

**Sub:** Police Reforms-Constitution of 'Police Establishment Board'-following the transfer policy of the Government-reg.

**Read :** Government Order No. HD 60 POSAEE 2009, dated 24-8-2009.

In the Government order read at (1) above sanction of the Government has been accorded for the constitution of Police Establishment Board. The functions of the board includes decision on transfers, postings, promotions and other service related matters of officers of and below the rank of Deputy Superintendent of Police.

Government has been issuing guidelines each year regarding transfer of Government employees and deciding on the period during which transfers to be effected.

Government has examined the matter and hence the following order.

**GOVERNMENT ORDER NO: HD 60 POSAEE 2009 (P-2), BANGALORE DATED; 13-01-2011**

After Para (5) of the order portion of the Government order No. HD 60 POSAEE 2009 dated 24-8-2009 the following shall be added as Para No. 6 and 7.

"6. The transfers decided and effected by the Police Establishment Board shall be strictly in accordance with the general transfer guidelines issued by Government from time to time.

7. Copies of proceedings of the Police Establishment Board and the transfer orders issued theron shall be sent to Government forthwith."

By Order and in the name of the Governor of Karnataka,

**T.N. RAVIPRAKASH**

Under Secretary to Government,

Home Department (Police Services).

P.R. 251

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ. ಮಂಜುನಾಥ, ಪಿ.ಎಸ್.ಐ (ಸಿವಿಲ್) ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 16/ಸಿಬ್ಬಂದಿ–1/2010–11, ದಿನಾಂಕ: 8–11–2010.

**ಪ್ರಸ್ತಾವನೆ :**

ಶ್ರೀ ಎಂ. ಮಂಜುನಾಥ, ಪಿ.ಎಸ್.ಐ (ಸಿವಿಲ್), ಮಹದೇವಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ದಿನಾಂಕ : 10–11–2005 ರಂದು ಸೇವೆಗೆ ಸೇರಿದ್ದು, ಅವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ : 9–5–2008 ಕ್ಕೆ ಪೂರ್ಣಗೊಳ್ಳುತ್ತದೆ. ಆದರೆ, ಸದರಿಯವರು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲದ ಕಾರಣ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಮಯ 4(1) (ii) ರನ್ವಯ ನೇಮಕಾತಿ ಪ್ರಾಧಿಕಾರಕ್ಕೆ ಒಳಪಟ್ಟಂತೆ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 9–5–2008 ರಿಂದ 9–8–2009 ರವರೆಗೆ ಒಂದು ವರ್ಷ 3 ತಿಂಗಳ ವರೆಗೆ ವಿಸ್ತರಿಸಿರುತ್ತಾರೆ ಎಂದು ಮೇಲೆ ಓದಲಾದ ಡಿ.ಜಿ.ಪಿ. ರವರ ಪತ್ರದಲ್ಲಿ ತಿಳಿಸಲಾಗಿರುತ್ತದೆ.

ಸದರಿ ಅಧಿಕಾರಿಯವರ ವಿರುದ್ಧ ಚಾಲ್ತಿ ಶಿಕ್ಷೆ/ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಕೆ.ಸಿ.ಎಸ್ (ಪ್ರೊಬೇಷನ್) ನಿಯಮಗಳು, 1977ರ ನಿಯಮ 4 ಮತ್ತು 5(1) ರನ್ವಯ ಇವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಸಮರ್ಥರಿರುವುದಾಗಿ ಹಾಗೂ ಸದರಿಯವರು ಕನ್ನಡ ಭಾಷಾ ಪರೀಕ್ಷೆಯಲ್ಲಿ ದಿನಾಂಕ: 4–11–2009 ರಂದು ಉತ್ತೀರ್ಣರಾಗಿರುವುದರಿಂದ ಇವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 10–8–2009 ರಿಂದ 4–11–2009 ರವರೆಗೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1) (i) ರನ್ವಯ ವಿಸ್ತರಿಸುವಂತೆಯೂ ಡಿಜಿ ಮತ್ತು ಐಜಿಪಿ ರವರ ಪತ್ರದಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 371 ಪೊಸಇ 2010, ಬೆಂಗಳೂರು, ದಿನಾಂಕ : 4–1–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ಎಂ. ಮಂಜುನಾಥ, ಪಿ.ಎಸ್.ಐ (ಸಿವಿಲ್) ಮಹದೇವಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ : 10–8–2009 ರಿಂದ 4–11–2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977 ರ ನಿಯಮ 10 ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕಗಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ. ಆರ್. 252

## ಒಳಾಡಳಿತ ಸಚಿವಾಲಯ

**ವಿಷಯ :** ವೀರಪ್ಪನ್ ಮತ್ತು ಆತನ ತಂಡದವರನ್ನು ಸಂಹಾರ ಮಾಡಿದ ಕಾರ್ಯಾಚರಣೆ ಪಡೆಯಲ್ಲಿ ತೊಡಗಿದ್ದ ಪೊಲೀಸ್ ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ನಿವೇಶನದ ಬದಲು ನಗದು ಹಣ ನೀಡುವ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಓಪಿ 2005, ದಿನಾಂಕ : 8–7–2005 ಕ್ಕೆ ಮಾರ್ಪಾಟು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 33 ಪಿಓಪಿ 2005, ದಿನಾಂಕ : 8–7–2005.
2. ಕಡತದ ಸಂಖ್ಯೆ : ಹೆಚ್‌ಡಿ 163 ಪಿಓಪಿ 2006.
3. ದಿನಾಂಕ : 6–4–2010 ರಂದು ಮಾನ್ಯ ಗೃಹ ಹಾಗೂ ಮುಜರಾಯಿ ಸಚಿವರು ಹಾಗೂ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು, ಸಂಸದೀಯ ಮತ್ತು ಶಾಸನ ರಚನೆ ಮತ್ತು ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
4. ಕಾರ್ಯದರ್ಶಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರ ಪತ್ರದ ಸಂಖ್ಯೆ : ಬೆಂಅಪ್ರಾ/ಅಸ/53/2010–11, ದಿನಾಂಕ : 28–4–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ, ನರಹಂತಕ ವೀರಪ್ಪನ್ ಮತ್ತು ಆತನ ತಂಡದವರನ್ನು ಸಂಹಾರ ಮಾಡಿದ ಕಾರ್ಯಾಚರಣೆಯಲ್ಲಿ ತೊಡಗಿದ್ದ 754 ಪೊಲೀಸ್ ಅಧಿಕಾರಿ/ ಸಿಬ್ಬಂದಿಗಳಿಗೆ ನಗದು ಬಹುಮಾನ ಮತ್ತು ವೇತನ ಬಡ್ತಿ ಹಾಗೂ ಅವರುಗಳ ಸ್ವಗ್ರಾಮದ ಜಿಲ್ಲಾ ಕೇಂದ್ರಗಳಲ್ಲಿ ಅಥವಾ ಅವರು ಇಚ್ಛಿಸುವ ಜಿಲ್ಲೆಯ ಇತರ ಸ್ಥಳಗಳಲ್ಲಿ ಇನ್ಸ್‌ಪೆಕ್ಟರ್ ವೃಂದಕ್ಕಿಂತ ಕೆಳಮಟ್ಟದ ಅಧಿಕಾರಿಗಳಿಗೆ 30' X 40' ಮತ್ತು ಡಿ.ವೈ.ಎಸ್.ಪಿ. ವೃಂದದ ಮೇಲ್ಪಟ್ಟ ಅಧಿಕಾರಿಗಳಿಗೆ 40' X 60' ಅಳತೆಯ ಉಚಿತ ನಿವೇಶನ ಹಂಚಲು ಮಂಜೂರಾತಿ ನೀಡಲಾಗಿದೆ.

2. ಅದರಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಇದನ್ನು ಒಳಾಡಳಿತ ಇಲಾಖೆ ಪರಿಶೀಲಿಸಿ ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ನಿವೇಶನಗಳನ್ನು ಹಂಚಲು ಗುರುತಿಸುವ ಸಲುವಾಗಿ ನಗರಾಭಿವೃದ್ಧಿ ಇಲಾಖೆಗೆ ದಿನಾಂಕ : 7–8–2006 ರಂದು ಕಳುಹಿಸಿಕೊಡಲಾಗಿತ್ತು.

3. ಈ ಮಧ್ಯೆ ಫಲಾನುಭವಿಗಳ ಪೈಕಿ ಅನೇಕರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಹಲವಾರು ರಿಟ್ ಅರ್ಜಿಗಳನ್ನು ದಾಖಲು ಮಾಡಿ ದಿನಾಂಕ : 8–7–2005 ರ ಪ್ರಕಾರ ನಿವೇಶನ ಹಂಚಲು ಸರ್ಕಾರಕ್ಕೆ ನಿರ್ದೇಶನ ನೀಡುವಂತೆ ಕೋರಿದ್ದರು. ಈ ಎಲ್ಲಾ ಪ್ರಕರಣಗಳ ಮೇಲೆ ಕರ್ನಾಟಕ ಉಚ್ಚ ನ್ಯಾಯಾಲಯವು ಕೆಳಗಿನಂತೆ ಸಾಮಾನ್ಯ ತೀರ್ಪು ನೀಡಿರುತ್ತದೆ.

"Petitions stand disposed of directing the respondents to consider the said representations for allotment of site, having regard to the fact that the petitioners xxx-xxx were in STF at the relevant point of time.

Compliance in six months

4. ಸದರಿ ತೀರ್ಪಿನ ಬಗ್ಗೆ ಸರ್ಕಾರಿ ವಕೀಲರು ಒಳಾಡಳಿತ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರಿಗೆ ಬರೆದ ಪತ್ರಗಳಲ್ಲಿ ಈ ಪ್ರಕರಣಗಳು ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ. ಈ ವಿಷಯಗಳನ್ನು ಅನಧಿಕೃತ ಟಿಪ್ಪಣಿಗಳ ಸಂಖ್ಯೆ : ಹೆಚ್‌ಡಿ 207 ಪಿಓಪಿ 2009 (ಭಾ), ದಿನಾಂಕ : 1–9–2009, 6–10–2009, 25–11–2009 ರಲ್ಲಿ ನಗರಾಭಿವೃದ್ಧಿ ಇಲಾಖೆಯ ಗಮನಕ್ಕೆ ತರಲಾಗಿದೆ. ಅರ್ಜಿದಾರರ ಪೈಕಿ ರಿಟ್ ಅರ್ಜಿ ಸಂಖ್ಯೆ : 21384/2009 ಮತ್ತು ರಿಟ್ ಅರ್ಜಿ ಸಂಖ್ಯೆ : 21479/2009 ರನ್ನು ದಾಖಲಿಸಿದ ಶ್ರೀ ಬಿ.ಕೆ. ವೆಂಕಪ್ಪ ರೈ ಮತ್ತು ಶ್ರೀ ಎನ್. ಜಗನ್ನಾಥನ್ ಎಂಬುವವರು ನಿಂದನಾ ಅರ್ಜಿ ಸಂಖ್ಯೆ : 365/2010 ಮತ್ತು 414/2010 ರ ಪ್ರಯುಕ್ತ ಅವರುಗಳಿಗೆ 30' X 40' ಅಳತೆಯ ನಿವೇಶನಗಳನ್ನು ಮೂಡಾ ಮತ್ತು ಬಿಡಿಎ ವತಿಯಿಂದ ಹಂಚಿಕೆ ಮಾಡಲಾಗಿದೆ. ಮುಂದುವರೆದು ರಿಟ್ ಅರ್ಜಿ ಸಂಖ್ಯೆ : 22213/2009, ರಿಟ್ ಅರ್ಜಿ ಸಂಖ್ಯೆ : 19957/2008 ಮತ್ತು

ರಿಟ್ ಅರ್ಜಿ ಸಂಖ್ಯೆ 23998/2009 ರನ್ನು ದಾಖಲಿಸಿದ ಶ್ರೀ ನಿಂಗಪ್ಪ ಮತ್ತು ಶ್ರೀ ಬಿ.ಕೆ. ಭಾಸ್ಕರ್ ರೈ ಮತ್ತು ಶ್ರೀ ಡಿ.ಆರ್. ಜಯಸ್ವಾಮಿ ಇವರುಗಳು ನಿಂದನಾ ಅರ್ಜಿ ಸಂಖ್ಯೆ : 507/2010, 546/2010 ಮತ್ತು 508/2010ರ ಪ್ರಯುಕ್ತ 30' X 40' ಅಳತೆಯ ನಿವೇಶನಗಳನ್ನು ಬಿಡಿಎ ಮತ್ತು ಮೂಡಾ ವತಿಯಿಂದ ಹಂಚಿಕೆ ಮಾಡಲಾಗಿದೆ ಆದರೆ ನಗರಾಭಿವೃದ್ಧಿ ಇಲಾಖೆಯು ಇತರೆ ಫಲಾನುಭವಿಗಳಿಗೆ ಅವರು ಇಚ್ಛಿಸಿರುವ ಅನೇಕ ಸ್ಥಳಗಳಲ್ಲಿ ನಿವೇಶಗಳ ಲಭ್ಯತೆಯು ಅವಶ್ಯಕತೆಗಿಂತ ಬಹಳ ಕಡಿಮೆ ಇದೆ ಹಾಗೂ ಹಲವೆಡೆ ನಿವೇಶನಗಳು ಲಭ್ಯವಿಲ್ಲ ಎಂದು ತಿಳಿಸಿರುತ್ತಾರೆ. ಹಾಗಾಗಿ ಕರ್ನಾಟಕ ಗೃಹ ಮಂಡಳಿ ವತಿಯಿಂದ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳಿಗೆ ನಿವೇಶನಗಳನ್ನು ಹಂಚುವ ಸಾಧ್ಯತೆಯ ಬಗ್ಗೆಯೂ ಪರಿಶೀಲಿಸಲಾಗಿ ಅಲ್ಲಿನ ವಸ್ತುಸ್ಥಿತಿಯೂ ಭಿನ್ನವಾಗಿರುವುದಿಲ್ಲ.

5. ಮೇಲಿನ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಮಾನ್ಯ ಮುಜರಾಯಿ ಮತ್ತು ಗೃಹ ಸಚಿವರು ಹಾಗೂ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು, ಸಂಸದೀಯ ಮತ್ತು ಶಾಸನ ರಚನೆ ಮತ್ತು ನಗರಾಭಿವೃದ್ಧಿ ಸಚಿವರುಗಳ ಅಧ್ಯಕ್ಷತೆಯಲ್ಲಿ ಈ ವಿಷಯವನ್ನು ಇತ್ಯರ್ಥಪಡಿಸುವ ಸಲುವಾಗಿ ದಿನಾಂಕ : 6–4–2010 ರಂದು ಒಂದು ಸಭೆಯನ್ನು ನಡೆಸಲಾಯಿತು. ಸಭೆಯಲ್ಲಿ ಈ ಕುರಿತು ಗಹನ ಚರ್ಚೆಯಾದ ನಂತರ, ನಿವೇಶನಗಳನ್ನು ಹಂಚುವ ಬಗ್ಗೆ ಇರುವ ತೊಂದರೆಗಳನ್ನು ಗಮನದಲ್ಲಿಟ್ಟುಕೊಂಡು, ಫಲಾನುಭವಿಗಳು ಇಚ್ಛಿಸಿದ ಸ್ಥಳಗಳಲ್ಲಿ ನಿವೇಶನ ಹಂಚಿಕೆ ಮಾಡುವ ಬದಲು ನಿವೇಶನ ಮೌಲ್ಯಕ್ಕೆ ಸಮನಾದ ನಗದು ಮೊತ್ತವನ್ನು ಫಲಾನುಭವಿಗಳಿಗೆ ನೀಡಲು ಅನುಕೂಲವಾಗುವಂತೆ ದಿನಾಂಕ : 8–7–2005 ರ ಸರ್ಕಾರಿ ಆದೇಶವನ್ನು ಮಾರ್ಪಡಿಸಲು ತೀರ್ಮಾನಿಸಲಾಯಿತು. ಅದರೆ, ಒಂದು ವೇಳೆ ನಿವೇಶನದ ಬದಲು ನಗದು ಮೊತ್ತ ನೀಡಿದಲ್ಲಿ ವಿವಿಧ ಜಿಲ್ಲೆಗಳಲ್ಲಿ ನಿವೇಶನದ ಬೆಲೆ ವಿಭಿನ್ನವಾಗಿರುವುದರಿಂದ, ಎಲ್ಲರಿಗೂ ಸಮಾನವಾಗಿ ನಗದು ಮೊತ್ತವನ್ನು ನೀಡಲು ಸಾಧ್ಯವಾಗದೇ ತಾರತಮ್ಯ ಉಂಟಾಗುವುದರಿಂದ ಈ ಸಮಸ್ಯೆಯನ್ನು ಬಗೆಹರಿಸಲು ನಿವೇಶನ ಹಂಚಿಕೆಯಾಗದಿರುವ ಫಲಾನುಭವಿಗಳಿಗೆ ಅವರುಗಳು ಅರ್ಹರಿರುವ ನಿವೇಶನದ ನಗದನ್ನು ಏಕರೂಪದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ 30' X 40' ಮತ್ತು 40' X 60' ನಿವೇಶನಗಳಿಗೆ ಅನ್ವಯಿಸುವ ಮೌಲ್ಯವನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತದೆ.

6. ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು 30' X 40' ಮತ್ತು 40' X 60' ಅಳತೆಯ ನಿವೇಶನಗಳೆರಡಕ್ಕೂ ಈಗಿನ ನಿವೇಶನ ಹಂಚಿಕೆ ದರವು ಪ್ರತಿ ಚದರ ಅಡಿಗೆ ರೂ. 210/– ಗಳಾಗುತ್ತವೆ ಎಂದು ತಿಳಿಸಿರುತ್ತಾರೆ. ಹಂಚಿಕೆಯಾಗಬೇಕಾಗಿರುವ 30' X 40' ಅಳತೆಯ ನಿವೇಶನಗಳ ಸಂಖ್ಯೆ ಒಟ್ಟು 735 (ನಿವೇಶನ ಹಂಚಿಕೆಯಾಗಿರುವ ಒಟ್ಟು ಐದು ಪೊಲೀಸ್ ಸಿಬ್ಬಂದಿಯನ್ನು ಹೊರತುಪಡಿಸಿ) ಹಾಗೂ ಹಂಚಿಕೆಯಾಗಬೇಕಾಗಿರುವ 40' X 60' ಅಳತೆಯ ನಿವೇಶನಗಳ ಸಂಖ್ಯೆ 14 ಆಗಿರುತ್ತದೆ. ಇದಕ್ಕೆ ಒಟ್ಟು ಸುಮಾರು ರೂ. 20.00 ಕೋಟಿಗಳ ಅಂದಾಜು ವೆಚ್ಚ ತಗಲುತ್ತದೆ.

7. ಮೇಲಿನ ಎಲ್ಲಾ ಅಂಶಗಳನ್ನು ವಿವರವಾಗಿ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿದ ಆದೇಶ ಸಂಖ್ಯೆ : ಹೆಚ್‌ಡಿ 92 ಪಿಒಪಿ 2010, ಬೆಂಗಳೂರು, ದಿನಾಂಕ : 17–5–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ : 8–7–2005 ರ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಒಪಿ 2005 ರನ್ನು ಭಾಗಶಃ ಮಾರ್ಪಡಿಸಿ ಅದರಲ್ಲಿನ 754 ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ಸ್ವಗ್ರಾಮದ (Home Town) ಜಿಲ್ಲಾ ಕೇಂದ್ರಗಳಲ್ಲಿ ಅಥವಾ ಅವರು ಇಚ್ಛಿಸುವ ಜಿಲ್ಲೆಯ ಇತರ ಸ್ಥಳದಲ್ಲಿ ನಿವೇಶನ ಹಂಚಿಕೆ ಮಾಡುವ ಬದಲು ನಿವೇಶನ ಹಂಚಿಕೆಯಾಗದಿರುವ ಪೊಲೀಸ್ ಅಧಿಕಾರಿ/ಸಿಬ್ಬಂದಿ ಅವರುಗಳು ಅರ್ಹರಿರುವ ನಿವೇಶನದ ನಗದನ್ನು ಏಕರೂಪದಲ್ಲಿ 30' X 40' ಮತ್ತು 40' X 60' ನಿವೇಶನಗಳಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ದರದಂತೆ ಪ್ರತಿ ಚದರ ಅಡಿಗೆ ರೂ. 210/–ಗಳ ಲೆಕ್ಕದಲ್ಲಿ ಅನ್ವಯಿಸುವ ಮೊತ್ತವನ್ನು ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು 2010–11 ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–109–1–01–ಜಿಲ್ಲಾ ಪೊಲೀಸ್–015–ಪೂರಕ ವೆಚ್ಚ ಇದರ ಅಡಿಯಲ್ಲಿ ಒದಗಿಸಿದ ರೂ. 20.00 ಕೋಟಿ ಹೆಚ್ಚುವರಿ ಅನುದಾನದಿಂದ ಭರಿಸತಕ್ಕದ್ದು.

ಈ ಕೆಳಕಂಡ ಪೊಲೀಸ್ ಸಿಬ್ಬಂದಿಗಳು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ನಿಂದನಾ ಅರ್ಜಿ ಸಂಖ್ಯೆ : 365/2010, 414/2010, 507/2010, 546/2010 ಮತ್ತು 508/2010 ರನ್ವಯ ಸರ್ಕಾರ ನಿವೇಶನ ಮಂಜೂರು ಮಾಡಿದ್ದು, ಅವರುಗಳು ಈ ಆದೇಶದನ್ವಯ ನಗದು ಮೊತ್ತಕ್ಕೆ ಅರ್ಹರಿರುವುದಿಲ್ಲ.

ಶ್ರೀಯುತರು :

1. ವೆಂಕಪ್ಪ ರೈ ಬಿ.ಕೆ. ನಿವೃತ್ತ ಆರ್.ಎಸ್.ಐ.
   S/o ಕಿಟ್ಟಣ್ಣರೈ
   ನಂ. 684/1, ಸೀತಾ ನಿಲಯ, 4ನೇ ಕ್ರಾಸ್, ಕುವೆಂಪು ರೋಡ್,
   ಎರಗಾನಹಳ್ಳಿ ಹೊಸ ಬಡಾವಣೆ, ಮೈಸೂರು
2. ಎನ್. ಜಗನ್ನಾಥನ್, ನಿವೃತ್ತ ಆರ್.ಎಸ್.ಐ, 4ನೇ ಪಡೆ, ಕೆ.ಎಸ್.ಆರ್.ಪಿ.,
   S/o ಲೇ. ಎಂ. ನಟೇಶನ್,
   ನಂ. 5/4, 3ನೇ ಕ್ರಾಸ್, 3ನೇ ಮೇನ್ ರೋಡ್, ಅಯ್ಯಪ್ಪ ಟೆಂಪಲ್ ಬ್ಲಾಕ್,
   ವನ್ನಾರಪೇಟೆ, ಬೆಂಗಳೂರು–47.
3. ನಿಂಗಪ್ಪ, ಪೊಲೀಸ್ ಪೇದೆ–491
   S/o ಚನ್ನಪ್ಪ
   9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ನಂ. 64, ಕುವೆಂಪು ಸಂಕೀರ್ಣ,
   6ನೇ ಬ್ಲಾಕ್, ಕೆ.ಎಸ್.ಆರ್.ಪಿ., ಪೊಲೀಸ್ ವಸತಿಗೃಹ,
   ಕೋರಮಂಗಲ, ಬೆಂಗಳೂರು–34.
4. ಬಿ.ಕೆ. ಭಾಸ್ಕರ್ ರೈ, ನಿವೃತ್ತ ಆರ್.ಎಸ್.ಐ.,
   S/o ಕೊರಗಪ್ಪರೈ

4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು,
ಆರ್/ಜ, ನಂ. 221, ಅನಂತ ನಿಲಯ,
2ಎ ಮೇನ್, ವಿನಾಯಕ ಬಡಾವಣೆ,
ನಾಗರಬಾವಿ 2ನೇ ಹಂತ, ಬೆಂಗಳೂರು–2

5. ಡಿ.ಆರ್. ಜಯಸ್ವಾಮಿ ಹೆಚ್.ಸಿ 116, ಮೈಸೂರು ಜಿಲ್ಲೆ
S/o ರಾಮಾರಾಧ್ಯ ಎ. ಚನ್ನವೀರಾಧ್ಯ,
ನಂ. 186, 3ನೇ ಕ್ರಾಸ್, ಕಾವೇರಿ ಮುಖ್ಯ ರಸ್ತೆ,
ರಾಘವೇಂದ್ರ ನಗರ, ಮೈಸೂರು

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 128 ವೆಚ್ಚ–11/2010, ದಿನಾಂಕ : 5–5–2010 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ)

ಪಿ. ಆರ್. 253

## ಒಳಾಡಳಿತ ಸಚಿವಾಲಯ
## ತಿದ್ದುಪಡಿ

**ಸಂಖ್ಯೆ : ಹೆಚ್‌ಡಿ 92 ಪಿಒಪಿ 2010, ಬೆಂಗಳೂರು, ದಿನಾಂಕ : 26–10–2010**

ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 92 ಪಿಒಪಿ 2010, ದಿನಾಂಕ : 17–5–2010ರ ಪ್ರಸ್ತಾವನೆ ಭಾಗದ ಕಂಡಿಕೆ (6)ರಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು 30' X 40' ಮತ್ತು 40' X 60' ಅಳತೆಯ ನಿವೇಶನಗಳೆರಡಕ್ಕೂ ಈಗಿನ ನಿವೇಶನ ಹಂಚಿಕೆ ದರವು " ಪ್ರತಿ ಚದರ ಅಡಿಗೆ ರೂ. 210/– ಗಳಾಗುತ್ತವೆ" ಎಂದು ನಮೂದಿಸಿರುವುದನ್ನು **"ಪ್ರತಿ ಚದರ ಮೀಟರಿಗೆ ರೂ. 2100/–ಗಳಾಗುತ್ತವೆ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಸದರಿ ಆದೇಶದ ಆದೇಶ ಭಾಗದ ಕಂಡಿಕೆ (1) ರಲ್ಲಿ ಸಹ 30' X 40' ಮತ್ತು 40' X 60' ನಿವೇಶನಗಳಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ದರದಂತೆ ಪ್ರತಿ ಚದರ ಅಡಿಗೆ ರೂ. 210/–ಗಳ ಲೆಕ್ಕದಲ್ಲಿ ಅನ್ವಯಿಸುವ ಮೊತ್ತವನ್ನು ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ" ಎಂಬುದರ ಬದಲು 30' X 40' ಮತ್ತು 40' X 60' ನಿವೇಶನಗಳಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ದರದಂತೆ ಪ್ರತಿ ಚದರ ಮೀಟರಿಗೆ ರೂ. 2100/ಗಳ ಲೆಕ್ಕದಲ್ಲಿ ಅನ್ವಯಿಸುವ ಮೊತ್ತವನ್ನು ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

ಪಿ. ಆರ್. 254

## ಒಳಾಡಳಿತ ಸಚಿವಾಲಯ

**ವಿಷಯ :** ರಾಜ್ಯದ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಬೀಟ್ ವ್ಯವಸ್ಥೆಗಾಗಿ ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎ.ಎಸ್.ಐ.) ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ : ಆರ್.ಎಲ್.ಎನ್.(1) 43/2010–11, ದಿನಾಂಕ: 29–9–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ರೈಲ್ವೆ ಮತ್ತು ಸಂಚಾರಿ ಪೊಲೀಸ್ ಠಾಣೆಗಳನ್ನು ಹೊರತುಪಡಿಸಿ ರಾಜ್ಯದಲ್ಲಿ ಒಟ್ಟು 833 ಪೊಲೀಸ್ ಠಾಣೆಗಳಿದ್ದು, ಆ ಪೈಕಿ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಠಾಣಾಧಿಕಾರಿಗಳಾಗಿರುವ 202 ಪೊಲೀಸ್ ಠಾಣೆಗಳಿದ್ದು ಆ ಠಾಣೆಗಳಿಗೆ ಹೊಸದಾಗಿ ಎರಡು ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಮತ್ತು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಠಾಣಾಧಿಕಾರಿಗಳಾಗಿರುವ 631 ಠಾಣೆಗಳಿಗೆ ಒಂದು ಸಹಾಯಕ ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಸೃಜಿಸುವುದು ಬೀಟ್ ವ್ಯವಸ್ಥೆಯನ್ನು ಉತ್ತಮಗೊಳಿಸಲು ಅಗತ್ಯವಾಗಿದ್ದು, ಅದರಂತೆ ಒಟ್ಟು 2035 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ಆದೇಶವನ್ನು ಹೊರಡಿಸುವಂತೆ ಹಾಗೂ ಈ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2055–00–108–0–01–ವೇತನಗಳು ಇದರಡಿಯಲ್ಲಿ ಭರಿಸಲಾಗುವುವೆಂದು ತಿಳಿಸಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 282 ಪಿಒಪಿ 2010, ಬೆಂಗಳೂರು, ದಿನಾಂಕ : 11–1–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲ ಪೊಲೀಸ್ ಠಾಣೆಗಳಲ್ಲಿ ಬೀಟ್ ವ್ಯವಸ್ಥೆಯನ್ನು ಉತ್ತಮಗೊಳಿಸುವ ಸಲುವಾಗಿ ಪೊಲೀಸ್ ಇನ್ಸ್‌ಪೆಕ್ಟರ್‌ರವರು ಠಾಣಾ ಅಧಿಕಾರಿಗಳಾಗಿರುವ 202 ಪೊಲೀಸ್ ಠಾಣೆಗಳಿಗೆ ಎರಡು ಹೊಸ ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಮತ್ತು ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ರವರು ಠಾಣಾ ಅಧಿಕಾರಿಗಳಾಗಿರುವ 631 ಪೊಲೀಸ್ ಠಾಣೆಗಳಿಗೆ ಒಂದು ಹೊಸ

ಸಹಾಯಕ ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳಂತೆ ಒಟ್ಟು 1035 ಸಹಾಯಕ ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಸದರಿ ಹೊಸ 1035 ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ತುಂಬತಕ್ಕದ್ದು.
2. ಮೇಲಿನಂತೆ ಹೊಸ ಸಹಾಯಕ ಪೊಲೀಸ್ ಇನ್ಸ್‌ಪೆಕ್ಟರ್ ಹುದ್ದೆಗಳ ಭರ್ತಿಯಿಂದ ಪೊಲೀಸ್ ಕಾನ್ಸ್‌ಟೇಬಲ್ ವೃಂದದಲ್ಲಿ ಉದ್ಭವಿಸುವ ರಿಕ್ತ ಸ್ಥಾನಗಳನ್ನು ಪ್ರಸ್ತುತ ಮಿತವ್ಯಯ ಆದೇಶವು ಜಾರಿಯಲ್ಲಿರುವುದರಿಂದ, ಸದ್ಯಕ್ಕೆ ತುಂಬತಕ್ಕದ್ದಲ್ಲ. ಈ ವಿಷಯವನ್ನು ಮುಂದೆ ಪ್ರತ್ಯೇಕವಾಗಿ ಅವಶ್ಯಕತೆ ಹಾಗೂ ಸಂಪನ್ಮೂಲದ ಲಭ್ಯತೆಯನ್ನು ಅನುಸರಿಸಿ ಪರಿಶೀಲಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2055-00-108-0-01-ವೇತನಗಳು" ಇದರಡಿಯಲ್ಲಿ ಒದಗಿಸಿರುವ ಅನುದಾನದ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 334 ವೆಚ್ಚ-11/2010ರ ದಿನಾಂಕ : 7-12-2010 ಹಾಗೂ ಟಿಪ್ಪಣಿ ಸಂಖ್ಯೆ : ಎಫ್‌ಡಿ 400 ವೆಚ್ಚ 2010, ದಿನಾಂಕ : 6-1-2011ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

ಪಿ. ಆರ್. 255

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದುಪಡಿ ಆದೇಶ

ಸಂಖ್ಯೆ: ಕಸಂವಾಪ್ರ 236 ಸ್ವೀಮರ 2010, ಬೆಂಗಳೂರು, ದಿನಾಂಕ 21-1-2011

ದಿನಾಂಕ 23-12-2010ರ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 236 ಸ್ವೀಮರ 2010ರಲ್ಲಿನ ಆದೇಶದ ಕಂಡಿಕೆ (1)ರ ಏಳನೇ ಸಾಲಿನಲ್ಲಿ ಬೆನ್ ಸನ್ ಟೌನ್ ಪೋಸ್ಟ್, ಬೆಂಗಳೂರು ಇವರಿಗೆ ನಂತರ ಈ ಕೆಳಗಿನಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

ದಿನಾಂಕ 23-12-2010 ರಿಂದ 22-12-2011ರ ವರೆಗೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. ನಂ. 286

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದುಪಡಿ ಆದೇಶ

ಸಂಖ್ಯೆ: ಕಸಂವಾಪ್ರ 243 ಸ್ವೀಮರ 2010, ಬೆಂಗಳೂರು, ದಿನಾಂಕ 21-1-2011

ದಿನಾಂಕ 23-12-2010ರ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 243 ಸ್ವೀಮರ 2010ರಲ್ಲಿನ ಆದೇಶದ ಕಂಡಿಕೆ (1)ರ ಏಳನೇ ಸಾಲಿನಲ್ಲಿ ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು ಇವರಿಗೆ ನಂತರ ಈ ಕೆಳಗಿನಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

ದಿನಾಂಕ 23-12-2010 ರಿಂದ 22-12-2011ರ ವರೆಗೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. ನಂ. 287

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ದಿನಾಂಕ 12, 13ನೇ ಜನವರಿ 2010 ರವರೆಗೆ ನಡೆಯುವ 5th Vibrant Gujarat Global 2011 Summit ಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಕೈವಾಇ:ಎಇಪಿ/ಎ1/ವಿಜಿಜಿಎಸ್/42/2010-11, ದಿನಾಂಕ: 16-12-2010.

**ಪ್ರಸ್ತಾವನೆ :**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ ಪತ್ರದಲ್ಲಿ, 2010 ರಲ್ಲಿ ನಡೆದ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶದ ನಂತರ ದಿನಪತ್ರಿಕೆಗಳಲ್ಲಿ ಪ್ರಗತಿ ಬಗ್ಗೆ ಪ್ರತಿ ಮಾಹೆ ಜಾಹಿರಾತುಗಳನ್ನು ನೀಡಲಾಗುತ್ತಿದ್ದು, ಈ ಬಗ್ಗೆ ಮಾರ್ಕೆಟಿಂಗ್ ಕನ್ಸಲ್ಟೆನ್ಸಿ ಮತ್ತು ಏಜೆನ್ಸಿ ರವರಿಗೆ ₹

38.00 ಲಕ್ಷಗಳನ್ನು ಪಾವತಿಸಬೇಕಾಗಿದೆ. ದಿನಾಂಕ 12–13 ಜನವರಿ 2011ರಲ್ಲಿ ನಡೆಯಲಿರುವ 5th Vibrant Gujarat Global 2011 Summit ಗಾಗಿ ಬ್ರೋಚರ್‌ಗಳು, ಕೈಗಾರಿಕಾ ನೀತಿ ಮತ್ತು ಇತರೆ ಮಾಹಿತಿಗಳು ಮುದ್ರಣ ಹಾಗೂ ಜಾಹೀರಾತಿಗಾಗಿ ₹ 15.00 ಲಕ್ಷಗಳ ಅವಶ್ಯಕತೆ ಇದ್ದು ಮತ್ತು ರಾಜ್ಯದ ಕೈಗಾರಿಕಾ ಪ್ರಗತಿಯ ಬಗ್ಗೆ ಜಿಲ್ಲಾವಾರು ಮಾಹಿತಿ ಮುದ್ರಿಸಲು ಸುಮಾರು ₹ 17.00 ಲಕ್ಷ ಅವಶ್ಯಕತೆ ಇದೆ. ಹೀಗಾಗಿ ಒಟ್ಟು ₹ 70.00 ಲಕ್ಷಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ರವರಿಗೆ ಬಿಡುಗಡೆ ಮಾಡಬೇಕಾಗಿರುತ್ತದೆ. ಇದಲ್ಲದೆ, ಮೇಲ್ಕಂಡ 5th Vibrant Gujarat Global 2011 Summit ನಲ್ಲಿ, ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ನೇತೃತ್ವದಲ್ಲಿ, ಹಿರಿಯ ಅಧಿಕಾರಿಗಳು ಹಾಗೂ 30 ಕೈಗಾರಿಕೋದ್ಯಮಿಗಳ ನಿಯೋಗವು ರಾಜ್ಯದ ಪರವಾಗಿ ಭಾಗವಹಿಸಲು ಮತ್ತು ಈ ಶೃಂಗ ಸಭೆಯ ಭಾಗವಾಗಿ ವಸ್ತು ಪ್ರದರ್ಶನ ಏರ್ಪಡಿಸಲಾಗಿದ್ದು, ಕರ್ನಾಟಕ ರಾಜ್ಯದ ವಿವಿಧ ಭಾಗಗಳ ಕೈಗಾರಿಕಾ ಉತ್ಪನ್ನಗಳನ್ನು ಪ್ರದರ್ಶಿಸಲು, ಕೈಗಾರಿಕಾ ಉತ್ತೇಜನದ ಬಗ್ಗೆ ಬಿಂಬಿಸಲು, ವಸ್ತುಪ್ರದರ್ಶನ ಏರ್ಪಡಿಸುವ ವೆಚ್ಚ ಒಟ್ಟು ₹ 10.00 ಲಕ್ಷಗಳನ್ನು ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಯ್ಯ ಕೈಗಾರಿಕಾ ವ್ಯಾಪಾರ ಕೇಂದ್ರ, ಬೆಂಗಳೂರು ರವರಿಗೆ ಬಿಡುಗಡೆ ಮಾಡಬೇಕಾಗಿದೆ.

ಮೇಲ್ಕಂಡ ಎರಡೂ ಸಂಸ್ಥೆಗಳಿಗೆ ಒಟ್ಟು ₹ 80.00 ಲಕ್ಷಗಳನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852–80–800–0–46" – 2010–11 ರ ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆ" ಯಡಿ ಭರಿಸುವುದಾಗಿ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 506 ಎಸ್‌ಪಿಐ 2010, ಬೆಂಗಳೂರು, ದಿನಾಂಕ : 20ನೇ ಜನವರಿ 2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಈ ಕೆಳಕಂಡಂತೆ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಮತ್ತು ವ್ಯವಸ್ಥಾಪಕ ನಿರ್ದೇಶಕರು ವಿಶ್ವೇಶ್ವರಯ್ಯ ವ್ಯಾಪಾರ ಕೇಂದ್ರ, ಬೆಂಗಳೂರು ರವರಿಗೆ 80.00 ಲಕ್ಷಗಳನ್ನು (ಎಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ವೆಚ್ಚಗಳ ವಿವರಗಳು ಈ ಕೆಳಕಂಡಂತಿದೆ.

| ಕ್ರ. ಸಂ. | ಸಂಸ್ಥೆಯ ಹೆಸರು | ಕಾರ್ಯಕ್ರಮಗಳು | ಒಟ್ಟು ಬಿಡುಗಡೆ ಮಾಡಬೇಕಾದ ಅನುದಾನ |
|---|---|---|---|
| 01 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು | 1. ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶದ ಪ್ರಗತಿಯ ಜಾಹೀರಾತು ವೆಚ್ಚ ₹ 38.00 ಲಕ್ಷ<br>2. ಶೃಂಗ ಸಭೆಗಾಗಿ ಕೈಗಾರಿಕಾ ನೀತಿಗಳ ಮಾಹಿತಿ ಮುದ್ರಣ ಹಾಗೂ ಜಾಹೀರಾತಿನ ವೆಚ್ಚ ₹ 15.00 ಲಕ್ಷ<br>3. ಕೈಗಾರಿಗೆ ಪ್ರಗತಿ ಬಗ್ಗೆ ಜಿಲ್ಲಾವಾರು ಮಾಹಿತಿಗಳನ್ನು ಮುದ್ರಿಸಲು: ₹ 17.00 ಲಕ್ಷ | ₹ 70.00 ಲಕ್ಷ |
| 02 | ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಯ್ಯ ಕೈಗಾರಿಕಾ ವ್ಯಾಪಾರ ಕೇಂದ್ರ, ಬೆಂಗಳೂರು | ಶೃಂಗ ಸಭೆಯ ಖರ್ಚುಗಳ ಅಂದಾಜು ವೆಚ್ಚ<br>1. 30 ಜನ ಕೈಗಾರಿಕೆ ಉದ್ಯಮಿಗಳಿಗೆ ತಲಾ ₹ 0.10 ಲಕ್ಷ ರಂತೆ ಸಹಾಯಧನ : ₹ 3.00 ಲಕ್ಷ<br>2. ಮಳಿಗೆ ನಿರ್ಮಿಸಲು : ₹ 6.00 ಲಕ್ಷ<br>3. ಇತರೆ : ₹ 1.00 ಲಕ್ಷ | ₹ 10.00 ಲಕ್ಷ |
| | | **ಒಟ್ಟು** | **₹ 80.00 ಲಕ್ಷ** |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852–80–800–0–46–125" ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" – 2010–11 (ಯೋಜನೆ) ರಡಿ ಭರಿಸತಕ್ಕದ್ದು.

ಮೇಲ್ಕಂಡ ಮೊತ್ತಗಳನ್ನು ಸಂಬಂಧಿಸಿದ ಸಂಸ್ಥೆಗಳ ವ್ಯವಸ್ಥಾಪಕ ನಿರ್ದೇಶಕರುಗಳು ಸಲ್ಲಿಸುವ ಸ್ವೀಕೃತ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 29 ವೆಚ್ಚ–1/2011, ದಿನಾಂಕ: 14–01–2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ. ಆರ್. 296

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮಂಡ್ಯದ ವಿ.ಸಿ.ಕ್ಷೇತ್ರದಲ್ಲಿ ಸರ್.ಎಂ. ವಿಶ್ವೇಶ್ವರಯ್ಯ ಕಬ್ಬು ಸಂಶೋಧನಾ ಸಂಸ್ಥೆ ಸ್ಥಾಪನೆಗಾಗಿ 2010-11ನೇ ಸಾಲಿನಲ್ಲಿ ಸರ್ಕಾರದಿಂದ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿ/ಕೆಎಸ್‌ಐ/22/2010-11 ದಿನಾಂಕ 16-09-2010 ಮತ್ತು ದಿನಾಂಕ 13-01-2011.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರಗಳಲ್ಲಿ ಮಂಡ್ಯದ ವಿ.ಸಿ.ಕ್ಷೇತ್ರದಲ್ಲಿ ಕೃಷಿ ವಿಶ್ವವಿದ್ಯಾನಿಲಯದ ವತಿಯಿಂದ ಕಬ್ಬು ಬೆಳೆಯ ಅಭಿವೃದ್ಧಿ ಮತ್ತು ಸಂಸ್ಕರಣೆ ನಡೆಸಲು ಸಕ್ಕರೆ ಸಂಸ್ಥೆಯನ್ನು ಸ್ಥಾಪಿಸಲಾಗುವುದು ಎಂದು ಮಾನ್ಯ ಮುಖ್ಯ ಮಂತ್ರಿಯವರು 2010-11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದ್ದು, ರಾಜ್ಯದ ದಕ್ಷಿಣ ಭಾಗದಲ್ಲಿನ ರೈತ ಸಮುದಾಯದ ಆಶೋತ್ತರಗಳಿಗೆ ಸ್ಪಂದಿಸಿ ಉತ್ತಮ ಇಳುವರಿ ಹಾಗೂ ಸಕ್ಕರೆ ಅಂಶ ಹೊಂದಿರುವ ಕಬ್ಬನ್ನು ಬೆಳೆಯಲು ಸಹಾಯಕವಾಗಲು ಹಾಗೂ ಕಬ್ಬು ಬೆಳೆ ಸಂಬಂಧದ ಸಂಶೋಧನೆಗಳನ್ನು ಕಾರ್ಯ ಕ್ಷೇತ್ರದಲ್ಲಿ ಕಾರ್ಯಗತಗೊಳಿಸಲು ಹಾಗೂ ದಕ್ಷಿಣ ಭಾಗದ ಸಕ್ಕರೆ ಕಾರ್ಖಾನೆಗಳಿಗೆ ಒಂದು ಸ್ವಾಯತ್ತ ಕಬ್ಬು ಅಭಿವೃದ್ಧಿ ಸಂಶೋಧನಾ ಕೇಂದ್ರದ ಅಗತ್ಯವಿದೆ ಎಂದು ಮನಗಂಡು ಮಂಡ್ಯದ ಸಮೀಪದಲ್ಲಿರುವ ಸಾತನೂರು ಗ್ರಾಮದಲ್ಲಿ ಈಗ ಲಭ್ಯವಿರುವ 100 ಎಕರೆ ಜಮೀನಿನಲ್ಲಿ ಸರ್.ಎಂ. ವಿಶ್ವೇಶ್ವರಯ್ಯ ಕಬ್ಬು ಸಂಶೋಧನಾ ಸಂಸ್ಥೆ ಸ್ಥಾಪನೆಗೆ ಸರ್ಕಾರದ ಆದೇಶ ಹೊರಡಿಸಲು ಹಾಗೂ ಈ ಸಂಸ್ಥೆಗೆ 2010-11ನೇ ಸಾಲಿನಲ್ಲಿ ₹ 50.00 ಲಕ್ಷ, 2011-12ನೇ ಸಾಲಿಗೆ ₹ 5.00 ಕೋಟಿ, 2012-13ನೇ ಸಾಲಿಗೆ ₹ 4.00 ಕೋಟಿ, 2013-14ನೇ ಸಾಲಿಗೆ ₹ 4.00 ಕೋಟಿ ಹಾಗೂ 2014-15ನೇ ಸಾಲಿಗೆ ₹ 2.50 ಕೋಟಿಗಳು ಸೇರಿ ಒಟ್ಟು ₹ 16.00 ಕೋಟಿಗಳ ಅನುದಾನವನ್ನು ಒದಗಿಸುವಂತೆಯೂ ಸಹ ಆಯುಕ್ತರು ಕೋರಿದ್ದಾರೆ.

ಈ ಸಂಸ್ಥೆಯ ಕಾರ್ಯ ನಿರ್ವಹಣೆಗೆ ಅಗತ್ಯವಿರುವ ಕೆಳಕಂಡ ವೈಜ್ಞಾನಿಕ ಮತ್ತು ಸಹಾಯಕ ವರ್ಗದ ಸಿಬ್ಬಂದಿಗಳನ್ನು ನೇಮಕ ಮಾಡುವ ಬಗ್ಗೆ ಸಿಬ್ಬಂದಿ ವಿವರವನ್ನು ನೀಡಿದ್ದು, ನೇಮಕಾತಿ ನಿಯಮ ರಚಿಸುವವರೆವಿಗೆ ವೈಜ್ಞಾನಿಕ ಸಿಬ್ಬಂದಿಗಳನ್ನು ಆಯಾ ವಿಭಾಗದಲ್ಲಿ ವಿದ್ಯಾರ್ಹತೆ ಪರಿಣಿತಿ ಹೊಂದಿರುವ ಅಭ್ಯರ್ಥಿಗಳನ್ನು ಒಂದು ವರ್ಷದ ಅವಧಿಗೆ ಒಪ್ಪಂದದ ಮೇರೆಗೆ ವಾರ್ಷಿಕ ವೇತನದ ಮೊತ್ತ ನಿಗದಿ ಪಡಿಸಿ ನೇಮಕ ಮಾಡಿಕೊಳ್ಳಲು ಹಾಗೂ ಕೆಳಕಂಡ ಕಛೇರಿ ಸಿಬ್ಬಂದಿಯನ್ನು ಒಂದು ವರ್ಷದ ಅವಧಿಗೆ ಹೊರ ಗುತ್ತಿಗೆ / ಒಪ್ಪಂದದಿಂದ ನೇಮಕಾತಿ ಮಾಡಲು ಆಡಳಿತ ಮಂಡಳಿಗೆ ಅನುಮತಿ ನೀಡಿ ಆದೇಶ ಹೊರಡಿಸಲು ಕೋರಿದ್ದಾರೆ.

| ವೈಜ್ಞಾನಿಕ ಮತ್ತು ಸಹಾಯಕ ಸಿಬ್ಬಂದಿ ವರ್ಗ | | ಕಛೇರಿ ಸಿಬ್ಬಂದಿ ವರ್ಗ | |
|---|---|---|---|
| 1) ವಿಜ್ಞಾನಿ (ಅಗ್ರಾನಾಮಿ) | - 1 ಹುದ್ದೆ | 1) ಕಛೇರಿ ಅಸಿಸ್ಟೆಂಟ್ಸ್ | - 2 ಹುದ್ದೆ |
| 2) ವಿಜ್ಞಾನಿ (ಅಗ್ರಿಕಲ್ಚರಲ್ ಎಕ್ಸ್‌ಟೆನ್ಷನ್) | - 1 ಹುದ್ದೆ | 2) ಅಕೌಂಟ್ಸ್ ಆಫೀಸರ್ | - 1 ಹುದ್ದೆ |
| 3) ವಿಜ್ಞಾನಿ (ಪ್ಲಾಂಟ್ ಬ್ರೀಡಿಂಗ್) | - 1 ಹುದ್ದೆ | 3) ವಾಹನ ಚಾಲಕರು | - 1 ಹುದ್ದೆ |
| 4) ಫಾರಂ ಅಧೀಕ್ಷಕರು | - 1 ಹುದ್ದೆ | 4) ವಾಚ್‌ಮನ್ | - 1 ಹುದ್ದೆ |
| 5) ಫೀಲ್ಡ್ ಅಸಿಸ್ಟೆಂಟ್ಸ್ | - 3 ಹುದ್ದೆ | 5) ಗ್ರೂಪ್-ಡಿ | - 2 ಹುದ್ದೆ |
| 6) ಲ್ಯಾಬ್ ಅಸಿಸ್ಟೆಂಟ್ಸ್ | - 3 ಹುದ್ದೆ | | |

ಸಂಸ್ಥೆಯ ಮುಖ್ಯಸ್ಥರನ್ನಾಗಿ Zonal Agriculture Research Station, V.C. Farm Mandya ಇಲ್ಲಿ Associate Director ಹುದ್ದೆಯಲ್ಲಿ ಕಾರ್ಯನಿರ್ವಹಿಸಿ ವಯೋ ನಿವೃತ್ತಿಹೊಂದಿರುವ ಡಾ: ಸಿ. ಶಂಕರಯ್ಯ ರವರನ್ನು ನೇಮಿಸುವ ಬಗ್ಗೆಯೂ ಸಹ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 50 ಎಸ್‌ಜಿಎಫ್ 2010, ಬೆಂಗಳೂರು, ದಿನಾಂಕ : 22ನೇ ಜನವರಿ 2011.**

ಆಯುಕ್ತರು ಕಬ್ಬು ಅಭಿವೃದ್ಧಿರವರ ಮೇಲೆ ಓದಲಾದ ಪ್ರಸ್ತಾವನೆಗಳಲ್ಲಿ ಕೋರಿರುವಂತೆ ರಾಜ್ಯದ ದಕ್ಷಿಣ ಭಾಗದಲ್ಲಿನ ರೈತ ಸಮುದಾಯದ ಆಶೋತ್ತರಗಳಿಗೆ ಸ್ಪಂದಿಸಿ ಉತ್ತಮ ಇಳುವರಿ ಹಾಗೂ ಸಕ್ಕರೆ ಅಂಶ ಹೊಂದಿರುವ ಕಬ್ಬನ್ನು ಬೆಳೆಯಲು ಸಹಾಯಕವಾಗಲು ಹಾಗೂ ಕಬ್ಬು ಬೆಳೆ ಸಂಬಂಧದ ಸಂಶೋಧನೆಗಳ ಕಾರ್ಯ ಕ್ಷೇತ್ರದಲ್ಲಿ ಕಾರ್ಯಗತಗೊಳಿಸಲು ಹಾಗೂ ದಕ್ಷಿಣ ಭಾಗದ ಸಕ್ಕರೆ ಕಾರ್ಖಾನೆಗಳಿಗೆ ಒಂದು ಸ್ವಾಯತ್ತ ಕಬ್ಬು ಅಭಿವೃದ್ಧಿ ಸಂಶೋಧನಾ ಕೇಂದ್ರದ ಅಗತ್ಯವಿದೆ ಎಂದು ಮನಗಂಡು ಮಂಡ್ಯದ ವಿ.ಸಿ. ಕ್ಷೇತ್ರದಲ್ಲಿ ಸರ್.ಎಂ. ವಿಶ್ವೇಶ್ವರಯ್ಯ ಕಬ್ಬು ಸಂಶೋಧನಾ ಸಂಸ್ಥೆ ಸ್ಥಾಪಿಸಲು ಪ್ರಾಥಮಿಕ ಕಾರ್ಯ ಹಾಗೂ ಅವಶ್ಯವಿರುವ ಇನ್ನಿತರ ಕಾರ್ಯ ಚಟುವಟಿಕೆಗಳನ್ನು ಕೈಗೊಳ್ಳಲು 2010-11ನೇ ಸಾಲಿಗೆ ₹ 1.00 ಕೋಟಿಗಳನ್ನು (ಒಂದು ಕೋಟಿ ರೂಪಾಯಿಗಳು ಮಾತ್ರ) (ಆವರ್ತಕ ವೆಚ್ಚಕ್ಕಾಗಿ ₹ 50.00 ಲಕ್ಷ ಮತ್ತು ಅನಾವರ್ತಕ ವೆಚ್ಚಕ್ಕಾಗಿ ₹ 50.00 ಲಕ್ಷಗಳು) ಲೆಕ್ಕ ಶೀರ್ಷಿಕೆ "2852-08-201-0-04-059 (Plan)" ರಡಿಯಲ್ಲಿ 2010-11ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಸಂಸ್ಥೆಯ ಕಾರ್ಯ ನಿರ್ವಹಣೆಗೆ ಅಗತ್ಯವಿರುವ ವೈಜ್ಞಾನಿಕ ಮತ್ತು ಸಹಾಯಕ ವರ್ಗದ 10 ಹುದ್ದೆಗಳನ್ನು ಸೃಜಿಸಲು ಅನುಮತಿ ನೀಡಲಾಗಿದ್ದು, ನೇಮಕಾತಿ ನಿಯಮ ರಚಿಸುವವರೆವಿಗೆ ವೈಜ್ಞಾನಿಕ ಮತ್ತು ಸಹಾಯಕ ವರ್ಗದ 10 ಸಿಬ್ಬಂದಿಗಳನ್ನು ಆಯಾ ವಿಭಾಗದಲ್ಲಿ ವಿದ್ಯಾರ್ಹತೆ, ಪರಿಣಿತಿ ಹೊಂದಿರುವ ಅಭ್ಯರ್ಥಿಗಳನ್ನು ಒಂದು ವರ್ಷದ ಅವಧಿಗೆ ಒಪ್ಪಂದದ ಮೇರೆಗೆ ವಾರ್ಷಿಕ ವೇತನದ ಮೊತ್ತ ನಿಗದಿ ಪಡಿಸಿ ನಿಯಮಾನುಸಾರ ನೇಮಕ ಮಾಡಿಕೊಳ್ಳಲು ಮತ್ತು ಕಛೇರಿ ಸಿಬ್ಬಂದಿ ವರ್ಗದ 4 ಹುದ್ದೆಯನ್ನು, (Computer Operator, Driver, Attender) ಹೊರ ಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ನೇಮಕಾತಿ ಮಾಡಿಕೊಳ್ಳಲು ಸಹ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಆದೇಶಿಸಲಾ**ಗಿದೆ.**

**ಸರ್.ಎಂ. ವಿಶ್ವೇಶ್ವರಯ್ಯ ಕಬ್ಬು ಸಂಶೋಧನಾ ಸಂಸ್ಥೆ ಸ್ಥಾಪನೆಗೆ ಮತ್ತು ಈ ಸಂಸ್ಥೆಗೆ ಮುಖ್ಯಸ್ಥರ ನೇಮಕಾತಿಗೆ ಆದೇಶಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು. ಬಿಡುಗಡೆಯಾದ ಹಣ ಬಳಕೆ ಬಗ್ಗೆ ಕಾಲ ಕಾಲಕ್ಕೆ ಸರ್ಕಾರಕ್ಕೆ ವರದಿ ನೀಡುವುದು.**

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1961 ವೆಚ್ಚ–1/2010 ದಿನಾಂಕ 27–12–2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ. ಆರ್. 297

## ಇಂಧನ ಸಚಿವಾಲಯ

**ವಿಷಯ :** ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸಸ್ ರಿಕವರಿ ಲಿ., ಸಂಸ್ಥೆಯು ಮಂಡೂರು ಗ್ರಾಮ, ಬೆಂಗಳೂರು ಪೂರ್ವದಲ್ಲಿ ಸ್ಥಾಪಿಸುವ 8 ಮೆ.ವ್ಯಾ., ವಿದ್ಯುತ್ ಉತ್ಪಾದನಾ ಸ್ಥಾವರಕ್ಕೆ ಪ್ರವೇಶ ತೆರಿಗೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 278 ಎನ್‌ಸಿಇ 2005 ದಿನಾಂಕ 14–10–2005.
2. ಪ್ರಧಾನ ನಿರ್ದೇಶಕರು, ಕ್ರೆಡಲ್ ರವರಿಂದ ಸ್ವೀಕೃತವಾದ ಪತ್ರ ಸಂಖ್ಯೆ: KRED/03/MSW/Srinivasa-Gayatri/10/2238 ದಿನಾಂಕ: 24/26–07–2010.
3. ಕರ್ನಾಟಕ ನ್ಯೂ ಇಂಡಸ್ಟ್ರಿಯಲ್ ಪಾಲಿಸಿ 2009–14 ಮತ್ತು ರಿನ್ಯೂವೆಬಲ್ ಎನರ್ಜಿ ಪಾಲಿಸಿ 2009–14.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸಸ್ ರಿಕವರಿ ಲಿ., ಸಂಸ್ಥೆಯು ಮಂಡೂರು ಗ್ರಾಮ, ಬೆಂಗಳೂರು ಪೂರ್ವದಲ್ಲಿ ಸ್ಥಾಪಿಸುವ 8 ಮೆ.ವ್ಯಾ., ವಿದ್ಯುತ್ ಉತ್ಪಾದನಾ ಸ್ಥಾವರಕ್ಕೆ ಸರ್ಕಾರಿ ಆದೇಶ ಸಂಖ್ಯೆ: ಇಎನ್ 278 ಎನ್‌ಸಿಇ 2005 ದಿನಾಂಕ: 14–10–2005 ರಲ್ಲಿ ಘನ ತ್ಯಾಜ್ಯ ಆಧಾರಿತ ವಿದ್ಯುತ್ ಯೋಜನೆಯನ್ನು ಕೆಲವು ಷರತ್ತುಗಳಿಗೊಳಪಟ್ಟು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಪ್ರಧಾನ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸಸ್ ರಿಕವರಿ ಲಿ., ಇವರು ಮಂಡೂರು ಗ್ರಾಮ, ಬೆಂಗಳೂರು ಪೂರ್ವ ಇಲ್ಲಿ MSW based ವಿದ್ಯುತ್ ಉತ್ಪಾದನಾ ಘಟಕವನ್ನು ಸ್ಥಾಪಿಸಲು ಖರೀದಿಸುವ ವಿದ್ಯುತ್ ಉಪಕರಣಗಳಿಗೆ ನೀಡಬಹುದಾದ ಪ್ರವೇಶ ತೆರಿಗೆಯ ವಿನಾಯಿತಿಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಹೊಸ ಕೈಗಾರಿಕಾ ನೀತಿ 2009–14 ನ್ನು ಆಧರಿಸಿ ನವೀಕರಿಸಬಹುದಾದ ಇಂಧನ ಯೋಜನೆಗಳಿಗೆ ಸಂಬಂಧಿಸಿದ ಪ್ರವೇಶ ತೆರಿಗೆ ಮತ್ತು ಇತರೆ ಆರ್ಥಿಕ ನೆರವುಗಳನ್ನು ಒದಗಿಸಲಾಗುವುದು ಎಂದು ತಿಳಿಸಲಾಗಿದೆ. ಆದುದರಿಂದ ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸಸ್ ರಿಕವರಿ ಲಿ., ಸಂಸ್ಥೆಯ ಕೋರಿಕೆಯಂತೆ ಪ್ರವೇಶ ತೆರಿಗೆ ವಿನಾಯಿತಿಯ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 67 ಇಬಿಎಸ್ 2010, ಬೆಂಗಳೂರು, ದಿನಾಂಕ : 21ನೇ ಜನವರಿ 2011.**

ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸಸ್ ರಿಕವರಿ ಲಿ., ಇವರು ಮಂಡೂರು ಗ್ರಾಮ ಬೆಂಗಳೂರು ಪೂರ್ವ ಇಲ್ಲಿ MSW based ವಿದ್ಯುತ್ ಉತ್ಪಾದನಾ ಘಟಕವನ್ನು ಸ್ಥಾಪಿಸಲು ಖರೀದಿಸುವ ವಿದ್ಯುತ್ ಉಪಕರಣಗಳಿಗೆ ನೀಡಬಹುದಾದ ಪ್ರವೇಶ ತೆರಿಗೆಯ ವಿನಾಯಿತಿಯನ್ನು ಕರ್ನಾಟಕ ರಿನ್ಯೂವೆಬಲ್ ಎನರ್ಜಿ ಪಾಲಿಸಿ 2009–14, ಹೊಸ ಕೈಗಾರಿಕಾ ನೀತಿ 2009–14 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 278 ಎನ್‌ಸಿಇ 2005 ದಿನಾಂಕ: 14–10–2005 ರಡಿಯಲ್ಲಿ ನೀಡಿರುವ ಷರತ್ತುಗಳನ್ವಯ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುಜಾತಮ್ಮ**
ಪೀಠಾಧಿಕಾರಿ, ಇಂಧನ ಇಲಾಖೆ.

ಪಿ. ಆರ್. 298

## ಇಂಧನ ಸಚಿವಾಲಯ

## ಸೇರ್ಪಡೆ

ಸಂಖ್ಯೆ: ಇಎನ್ 26 ಎನ್‌ಸಿಇ 2008, ಬೆಂಗಳೂರು, ದಿನಾಂಕ: 10ನೇ ಜನವರಿ 2011

ಸರ್ಕಾರಿ ಆದೇಶ ಸಂಖ್ಯೆ: ಇಎನ್ 26 ಎನ್‌ಸಿಇ 2008 ದಿನಾಂಕ: 03–07–2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

'Weir Latitude: 12$^{O}$42'33" Longitude: 75$^{O}$29'30"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ. ಆರ್. 299

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೆ: ಮುಕಂದ ಲಿ., ರವರಿಗೆ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಐ 408 ಎಸ್‌ಪಿಐ 2010, ದಿನಾಂಕ 01–12–2010ರ ಪ್ರಕಾರ ಮಂಜೂರಾದ ಅರ್ಹ ತೆರಿಗೆ ಮಾರಾಟ ಸೌಲಭ್ಯವನ್ನು ಉಪಯೋಗಿಸಿಕೊಳ್ಳಲು ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:, ಸಿಐ 62 ಎಸ್‌ಪಿಐ 1998, ಬೆಂಗಳೂರು, ದಿನಾಂಕ: 08–01–2001.
2. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 126 ಸಿಎಸ್‌ಎಲ್ 1998(1) ರಿಂದ (3), ದಿನಾಂಕ: 05–02–1999.
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 78 ಸಿಎಸ್‌ಎಲ್ 2001(4) ದಿನಾಂಕ: 01–09–2001.
4. FAVC NO: IDL/E1/STE/MKD/2000-01, ದಿನಾಂಕ: 16–12–2000.
5. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 56 ಸಿಎಸ್‌ಎಲ್ 2005(1) ದಿನಾಂಕ: 18–04–2005.
6. ಸರ್ಕಾರಿ ಆದೇಶ ಸಂಖ್ಯೆ: ಸಿಐ 408 ಎಸ್‌ಪಿಐ 2010, ದಿನಾಂಕ: 01–12–2010.
7. ಮೆ: ಮುಕಂದ ಲಿ., ರವರ ದಿನಾಂಕ: 21–12–2010 ಮತ್ತು 05–01–2011 ರ ಪತ್ರಗಳು.

**ಪ್ರಸ್ತಾವನೆ :**

ಮೇಲೆ (6) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಶೇಕಡ 40 ಕ್ಕಿಂತ ಕಡಿಮೆ ಅರ್ಹ ಉತ್ತೇಜನ ಮತ್ತು ರಿಯಾಯಿತಿಗಳನ್ನು ಉಪಯೋಗಿಸಿಕೊಂಡ ಭಾರಿ ಕೈಗಾರಿಕೆಗಳಿಗೆ ಅವುಗಳನ್ನು ಉಪಯೋಗಿಸಿಕೊಳ್ಳಲು ಹಲವು ಷರತ್ತುಗಳೊಂದಿಗೆ ಅನುಮತಿ ನೀಡಲಾಗಿದೆ.

ಅದರಂತೆ, ಮೇಲೆ (7) ರಲ್ಲಿ ಓದಲಾದ ಪತ್ರಗಳಲ್ಲಿ ಈ ಸೌಲಭ್ಯವನ್ನು ಉಪಯೋಗಿಸಿಕೊಳ್ಳಲು ತಮಗೆ ಅನುಮತಿ ನೀಡಬೇಕೆಂದು ಮೆ: ಮುಕಂದ ಲಿ., ರವರು ಕೋರಿರುತ್ತಾರೆ. ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ವಿಶೇಷ ಸವಲತ್ತುಗಳನ್ನು ಪಡೆಯಲು ತಮ್ಮ ಸಂಸ್ಥೆಯು ಅರ್ಹವಾಗಿದ್ದು, ಅದರಂತೆ ಪರಿಷ್ಕೃತ Fixed Assets Valuation Certificate ನೀಡಲು ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರಿಗೆ ಸೂಕ್ತ ನಿರ್ದೇಶನ ನೀಡಬೇಕೆಂದು ಪ್ರಸ್ತಾಪಿಸಿರುತ್ತಾರೆ.

ಮೆ: ಮುಕಂದ ಲಿ., ಅವರಿಗೆ ಸಿಐ 62 ಎಸ್‌ಪಿಐ 1998, ದಿನಾಂಕ 01–09–2001 ಹಾಗೂ ಸಂಬಂಧಿತ ಅಧಿಸೂಚನೆಗಳ ಪ್ರಕಾರ ರೂ. 212.84 ಕೋಟಿ ಮಾರಾಟ ತೆರಿಗೆ ವಿನಾಯಿತಿ ನೀಡಿದ್ದು 10–09–2006 ರವರೆಗೆ ರೂ. 70.31 ಕೋಟಿಗಳ ತೆರಿಗೆ ವಿನಾಯಿತಿ ಸೌಲಭ್ಯವನ್ನು ಉಪಯೋಗಿಸಿಕೊಂಡಿರುತ್ತಾರೆ. ಇದು ಅರ್ಹ ಮೊತ್ತದ ಶೇಕಡ 33 ರಷ್ಟಾಗಿರುತ್ತದೆ.

ಮೆ: ಮುಕಂದ ಲಿ., ಅವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 372 ಎಸ್‌ಪಿಐ 2010, ಬೆಂಗಳೂರು, ದಿನಾಂಕ : 24ನೇ ಜನವರಿ 2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಮೆ: ಮುಕಂದ ಲಿ., ಗಿಣಿಗೇರ ಗ್ರಾಮ, ಕೊಪ್ಪಳ ಜಿಲ್ಲೆ, ಇವರಿಗೆ ಉಲ್ಲೇಖದಲ್ಲಿ ಓದಲಾದ ಆದೇಶಗಳನ್ವಯ ಮಂಜೂರಾದ ಅರ್ಹ ತೆರಿಗೆ ವಿನಾಯಿತಿ ಸೌಲಭ್ಯದ ಶೇಕಡ 50 ರಷ್ಟು ಮೊತ್ತದ (ಈಗಾಗಲೇ ಉಪಯೋಗಿಸಿಕೊಂಡ ಉತ್ತೇಜನ ರಿಯಾಯಿತಿ ಮೊತ್ತವನ್ನು ಸೇರಿಸಿ) ಮಾರಾಟ ತೆರಿಗೆಯ ವಿನಾಯಿತಿಯನ್ನು ಉಪಯೋಗಿಸಿಕೊಳ್ಳಲು 2 ವರ್ಷಗಳ ಹೆಚ್ಚುವರಿ ಅವಧಿಯನ್ನು ಈಗ ನೀಡಲಾಗಿದೆ.

ಎರಡು ವರ್ಷಗಳ ಅವಧಿಯನ್ನು ಪರಿಷ್ಕೃತ Fixed Assets Valuation Certificate ನೀಡಿದ ದಿನಾಂಕದಿಂದ ಲೆಕ್ಕ ಹಾಕಲಾಗುವುದು.

ಮಾರಾಟ ತೆರಿಗೆ ವಿನಾಯಿತಿ ಸೌಲಭ್ಯವು ಸರ್ಕಾರಕ್ಕೆ ಸಂದಾಯ ಮಾಡಿದ ಮೌಲ್ಯವರ್ಧಿತ ತೆರಿಗೆಯ ಮರು ಪಾವತಿ ರೂಪದಲ್ಲಿ ದೊರೆಯುತ್ತದೆ.

ಆಯುಕ್ತರು, ಕೈಗಾರಿಕಾ ಅಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರಿಗೆ ಹಿಂದಿನ ಬಂಡವಾಳ ಹೂಡಿಕೆಯಷ್ಟು, ಮೊತ್ತದಷ್ಟೇ ಪರಿಷ್ಕೃತ Fixed Assets Valuation Certificate ನೀಡಲು ಈ ಮೂಲಕ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ. ಆರ್. 300

## ಕೃಷಿ ಸಚಿವಾಲಯ

**ವಿಷಯ :** ಗುಲ್ಬರ್ಗಾದಲ್ಲಿ ಕೃಷಿ ಸಂಶೋಧನಾ ಕೇಂದ್ರವನ್ನು ಕೃಷಿ ಕಾಲೇಜನ್ನಾಗಿ ಪರಿವರ್ತಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಕುಲಪತಿಗಳು ಕೃಷಿ ವಿಶ್ವವಿದ್ಯಾಲಯ, ರಾಯಚೂರುರವರ ದಿನಾಂಕ: 12–09–2010ರ ಪತ್ರ ಸಂಖ್ಯೆ: ವಿಕಾ/ಕೃವಿವಿರಾ/ಹಣಕಾಸು/1309/2009–10.
2. ದಿನಾಂಕ 4–10–10–2010 ರಂದು ನಡೆದ ಸಚಿವ ಸಂಪುಟ ನಿರ್ಣಯ.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ರಾಯಚೂರು ಕೃವಿವಿರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ ಕೃಷಿ ಮಹಾವಿದ್ಯಾಲಯವನ್ನು ಆ ಭಾಗದ ರೈತರ ಹಿತದೃಷ್ಟಿಯಿಂದ ಸ್ಥಾಪಿಸಲು ಹಾಗೂ ಮಹಾವಿದ್ಯಾಲಯಕ್ಕೆ ಶಿಕ್ಷಕರ/ಶಿಕ್ಷಕೇತರರ ಒಟ್ಟು 199 ಹುದ್ದೆಗಳನ್ನು ಸೃಜಿಸುವಂತೆ ಮಹಾವಿದ್ಯಾಲಯಕ್ಕೆ ಬೇಕಾಗುವ

ಕಟ್ಟಡಗಳು ಹಾಗೂ ಪೀಠೋಪಕರಣಗಳ ಬಗ್ಗೆ ಹಾಗೂ ಸದರಿ ಮಹಾವಿದ್ಯಾಲಯಕ್ಕೆ ಬೇಕಾಗುವ ಸುಮಾರು ರೂ. 50.00 ಕೋಟಿಗಳು ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಕೋರಿರುತ್ತಾರೆ.

2) ಮೇಲೆ (2)ರಲ್ಲಿ ಓದಲಾದ ಟಿಪ್ಪಣಿಯಂತೆ ಸಚಿವ ಸಂಪುಟವು ಮುಂದಿನ ಶೈಕ್ಷಣಿಕ ಸಾಲಿನಿಂದ ಗುಲ್ಬರ್ಗಾದಲ್ಲಿರುವ ಕೃಷಿ ಸಂಶೋಧನಾ ಕೇಂದ್ರವನ್ನು ಕೃಷಿ ಕಾಲೇಜನ್ನಾಗಿ ಪರಿವರ್ತಿಸುವ ಪ್ರಸ್ತಾವನೆಗೆ ತಾತ್ವಿಕ ಅನುಮೋದನೆ ನೀಡಿರುತ್ತದೆ.

3) ಮೇಲ್ಕಂಡ ಉದ್ದೇಶಕ್ಕಾಗಿ 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2415–80–277–1–01 (ಯೋಜನೆ) ಅಡಿಯಲ್ಲಿ ರೂ. 1400.00 ಲಕ್ಷ ಮತ್ತು 2415–80–277–2–01 (ಯೋಜನೆ) ಅಡಿಯಲ್ಲಿ ರೂ. 1050.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 256 ಕೃವಿವಿ 2010, ಬೆಂಗಳೂರು, ದಿನಾಂಕ: 25–1–2011**

ರಾಯಚೂರು ಕೃಷಿ ವಿಶ್ವವಿದ್ಯಾಲಯದ ಅಧೀನದಲ್ಲಿರುವ ಕೃಷಿ ಸಂಶೋಧನಾ ಕೇಂದ್ರವನ್ನು ಕೃಷಿ ಮಹಾವಿದ್ಯಾಲಯವನ್ನಾಗಿ ಪರಿವರ್ತಿಸುವ ಮೂಲಕ ಗುಲ್ಬರ್ಗಾ ಜಿಲ್ಲೆಯಲ್ಲಿ ಕೃಷಿ ಮಹಾವಿದ್ಯಾಲಯವನ್ನು ಮುಂದಿನ ಶೈಕ್ಷಣಿಕ 2011–12 ನೇ ಸಾಲಿನಿಂದ ಸ್ಥಾಪಿಸಲು ಹಾಗೂ ಈ ಉದ್ದೇಶಕ್ಕಾಗಿ ಸಲ್ಲಿಸಿರುವ ರೂ. 50.00 ಕೋಟಿಗಳ (ಐವತ್ತು ಕೋಟಿಗಳು ಮಾತ್ರ) ಯೋಜನೆಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 449/ವೆ4/2010ರಲ್ಲಿ ದಿನಾಂಕ 31–12–2010 ರಂದು ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 301 ಕೃಷಿ ಇಲಾಖೆ

## ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಆಡಳಿತಾತ್ಮಕ ವೆಚ್ಚಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 35 ಅಡವಿ 2010. ದಿನಾಂಕ: 15–04–10.
2. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 57 ಅಡವಿ 2010. ದಿನಾಂಕ: 18–06–10.
3. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 57 ಎಡಿಎಂ 2010. ದಿನಾಂಕ: 08–09–10.
4. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 57 ಎಡಿಎಂ 2010. ದಿನಾಂಕ: 16–11–10.
5. ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ರವರ ಪತ್ರ ಸಂಖ್ಯೆ: ಕರಾದೂಸಂಅಕೇಂ/71/ಜಿಇಎನ್/2010. ದಿನಾಂಕ: 14–12–2010.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ – 059 ಇತರೆ ಖರ್ಚು (ಯೋಜನೆ)" ರಡಿಯಲ್ಲಿ ರೂ. 350.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 350.00 ಲಕ್ಷಗಳ ಮೊತ್ತದಲ್ಲಿ ಸದರಿ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 150.00 ಲಕ್ಷಗಳನ್ನು ಹಾಗೂ ಭೌಗೋಳಿಕ ಮಾಹಿತಿಪದ್ಧತಿ ಕೋಶದ ಯೋಜನೆಗಾಗಿ ರೂ. 45.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 18–06–2010ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಮೊದಲನೆಯ ಕಂತಾಗಿ ಅನುದಾನ ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 08–09–2010ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಎರಡನೆಯ ತ್ರೈಮಾಸಿಕ ಕಂತಾಗಿ 37.50 ಲಕ್ಷಗಳನ್ನು ಹಾಗೂ ಭೌಗೋಳಿಕ ಮಾಹಿತಿ ಪದ್ಧತಿ ಕೋಶದ ಅನುಷ್ಠಾನದ ವೆಚ್ಚಗಳಿಗಾಗಿ ನಿಗದಿಪಡಿಸಲಾದ ರೂ. 45.00 ಲಕ್ಷಗಳಲ್ಲಿ ರೂ. 22.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಂಕೀರ್ಣ ಮತ್ತು ಸಮ್ಮೇಳನಕ್ಕಾಗಿ ಒದಗಿಸಲಾಗಿರುವ ರೂ. 20.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (5) ರಲ್ಲಿ ಓದಲಾದ ದಿನಾಂಕ 14–12–2010 ರ ಪತ್ರದಲ್ಲಿ 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 3451–00–090–2–08 ಯೋಜನೆ ಅಡಿಯಲ್ಲಿ ರೂ. 350.00 ಲಕ್ಷಗಳನ್ನು ರೂ. 150.00 ಲಕ್ಷಗಳನ್ನು ಕಛೇರಿ ನಿರ್ವಹಣೆ ಮತ್ತು ಇತರೆ ವೆಚ್ಚಗಳಿಗಾಗಿ ನಿಗದಿಪಡಿಸಲಾಗಿದ್ದು ಈ ಮೊತ್ತದಲ್ಲಿ ಈಗಾಗಲೇ ರೂ. 75.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು ಬಾಕಿ ಉಳಿದಿರುವ ರೂ. 75.00 ಲಕ್ಷಗಳನ್ನು ಕಛೇರಿ ನಿರ್ವಹಣೆ ಮತ್ತು ಆಡಳಿತಾತ್ಮಕ ವೆಚ್ಚಗಳನ್ನು ಭರಿಸಲು ಹಣ ಬಿಡುಗಡೆ ಮಾಡಲು ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಕೋರಿರುತ್ತಾರೆ. ಪ್ರಯುಕ್ತ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 57 ಎಡಿಎಂ 2010, ಬೆಂಗಳೂರು, ದಿನಾಂಕ: 27–1–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ನಿಗದಿಪಡಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಬಾಕಿ ಉಳಿದಿರುವ ರೂ. 75.00 ಲಕ್ಷಗಳ (ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11 ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **" 3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ – 059 ಇತರೆ ಖರ್ಚು (ಯೋಜನೆ)"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 13 ವೆಚ್ಚ –2/11 ದಿ: 19–01–2011ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 302

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ರಾಜ್ಯದ ಸಹಕಾರಿ ನೂಲಿನ ಗಿರಣಿಗಳಿಗೆ ಬೇಕಾದ ಯಂತ್ರೋಪಕರಣಗಳ ಖರೀದಿ ಹಾಗೂ ಕಾಮಗಾರಿಗಳ ವೆಚ್ಚಗಳಿಗಾಗಿ ಅಧಿಕಾರ ಪ್ರತ್ಯಾಯೋಜನೆ ಮಾಡುವ ಬಗ್ಗೆ.

**ಓದಲಾಗಿದೆ** : 1. ದಿನಾಂಕ 02–11–2002ರ ಸಮಾತೂ 39 ಸಿಐಎಂ 2002ನೇ ಸಂಖ್ಯೆಯ ಸುತ್ತೋಲೆ.
2. ದಿನಾಂಕ 08–10–2007ರ ಸಇ 35 ಸಿಐಎಂ 2007ನೇ ಸಂಖ್ಯೆಯ ಸರ್ಕಾರದ ಆದೇಶ.
3. ದಿನಾಂಕ 24–05–2008ರ ಸಿಆಸುಇ 394 ಸಅಸೇ 2008ನೇ ಸಂಖ್ಯೆಯ ಸರ್ಕಾರದ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 01 ಸಿಐಎಂ 2011, ಬೆಂಗಳೂರು, ದಿನಾಂಕ: 27–1–2011**

ದಿನಾಂಕ 24–05–2008ರ ಸರ್ಕಾರದ ಆದೇಶದ ಮೂಲಕ ರಾಜ್ಯದ ಸಹಕಾರಿ ನೂಲಿನ ಗಿರಣಿಗಳಿಗೆ ಸಂಬಂಧಿಸಿದ ವಿಷಯವನ್ನು ಸಹಕಾರ ಇಲಾಖೆಯಿಂದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ವರ್ಗಾಯಿಸಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾಗಿರುವ ದಿನಾಂಕ 08–10–2007ರ ಸರ್ಕಾರದ ಆದೇಶದಲ್ಲಿ ಪ್ರಕಟವಾಗಿರುವ " ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಹಕಾರ ಇಲಾಖೆ" ಎಂಬ ಪದಗಳಿಗೆ ಬದಲಾಗಿ "ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ" ಎಂಬ ಪದಗಳನ್ನು ಓದಿಕೊಳ್ಳುವಂತೆ ಈ ಮೂಲಕ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸಹಕಾರ ಸಕ್ಕರೆ)

ಪಿ.ಆರ್. 303

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ರಾಜ್ಯದಲ್ಲಿನ ಸಹಕಾರಿ ನೂಲಿನ ಗಿರಣಿಗಳಿಗೆ ಬೇಕಾದ ಯಂತ್ರೋಪಕರಣಗಳನ್ನು ಖರೀದಿಸುವ ಮತ್ತು ಇತರ ವಿಷಯಗಳಲ್ಲಿ ಸಲಹೆ ಸೂಚನೆಗಳನ್ನು ನೀಡಲು ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ** : 1. ದಿನಾಂಕ 15–05–1995ರ ಸಿಎಂಡಬ್ಲ್ಯೂ 45 ಸಿಐಎಂ 1994ನೇ ಸಂಖ್ಯೆಯ ಸರ್ಕಾರದ ಆದೇಶ.
2. ದಿನಾಂಕ 24–11–2000ದ ಸಿಎಂಡಬ್ಲ್ಯೂ 24 ಸಿಐಎಂ 1999ನೇ ಸಂಖ್ಯೆಯ ಸರ್ಕಾರದ ಆದೇಶ.
3. ದಿನಾಂಕ 29–03–2008ರ ಸಇ 06 ಸಿಐಎಂ 2008ನೇ ಸಂಖ್ಯೆಯ ಸರ್ಕಾರದ ಆದೇಶ.
4. ದಿನಾಂಕ 24–05–2008ರ ಸಿಆಸುಇ 394 ಸಅಸೇ 2008ನೇ ಸಂಖ್ಯೆಯ ಸರ್ಕಾರದ ಆದೇಶ.

**ಪ್ರಸ್ತಾವನೆ :**

ರಾಜ್ಯದಲ್ಲಿನ ಸಹಕಾರಿ ನೂಲಿನ ಗಿರಣಿಗಳಿಗೆ ಬೇಕಾದ ಯಂತ್ರೋಪಕರಣಗಳನ್ನು ಖರೀದಿಸುವ ಮತ್ತು ಇತರ ವಿಷಯಗಳಲ್ಲಿ ಸಲಹೆ/ಸೂಚನೆಗಳನ್ನು ನೀಡುವ ಸಲುವಾಗಿ ಸಹಕಾರ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಲಹಾ ಸಮಿತಿಯೊಂದನ್ನು ರಚಿಸಿ ದಿನಾಂಕ 15–05–1995 ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು. ಈ ಸಮಿತಿಯನ್ನು ದಿನಾಂಕ 24–11–2000ದ ಆದೇಶದ ಮೂಲಕ ಮನರ್ರಚಿಸಲಾಗಿತ್ತು ನಂತರ ಸದರಿ ಸಮಿತಿಯನ್ನು ಜವಳಿ ಅಭಿವೃದ್ಧಿ ಆಯುಕ್ತರು, ಕೈಮಗ್ಗ ಮತ್ತು ಜವಳಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಮನರ್ರಚಿಸಿ ದಿನಾಂಕ 29–03–2008 ರಂದು ಆದೇಶವನ್ನು ಹೊರಡಿಸಲಾಗಿತ್ತು.

ದಿನಾಂಕ 24–05–2008ರ ಸರ್ಕಾರದ ಆದೇಶದ ಮೂಲಕ ರಾಜ್ಯದ ಸಹಕಾರಿ ನೂಲಿನ ಗಿರಣಿಗಳಿಗೆ ಸಂಬಂಧಿಸಿದ ವಿಷಯವನ್ನು ಸಹಕಾರ ಇಲಾಖೆಯಿಂದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ವರ್ಗಾಯಿಸಲಾಗಿರುತ್ತದೆ. ಈ ಕಾರಣದಿಂದಾಗಿ ರಾಜ್ಯದ ನೂಲಿನ ಗಿರಣಿಗಳಿಗೆ ಬೇಕಾದ ಯಂತ್ರೋಪಕರಣಗಳನ್ನು ಖರೀದಿಸುವ ಮತ್ತು ಇತರ ವಿಷಯಗಳಲ್ಲಿ ಸಲಹೆ ಸೂಚನೆಗಳನ್ನು ನೀಡುವ ಸಂಬಂಧ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ಮನರ್ರಚಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 01 ಸಿಐಎಂ 2011, ಬೆಂಗಳೂರು, ದಿನಾಂಕ: 27–01–2011**

ದಿನಾಂಕ 15–05–1995, 24–11–2000 ಮತ್ತು 29–03–2008 ರಂದು ಹೊರಡಿಸಲಾಗಿರುವ ಸರ್ಕಾರದ ಆದೇಶಗಳನ್ನು ರದ್ದುಗೊಳಿಸಿ, ರಾಜ್ಯದಲ್ಲಿನ ಸಹಕಾರಿ ನೂಲಿನ ಗಿರಣಿಗಳಿಗೆ ಬೇಕಾದ ಯಂತ್ರೋಪಕರಣಗಳನ್ನು ಖರೀದಿಸುವ ಮತ್ತು ಇತರ ವಿಷಯಗಳಲ್ಲಿ ಸಲಹೆ ಸೂಚನೆಗಳನ್ನು ನೀಡುವ ಸಲುವಾಗಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸಲು ಸರ್ಕಾರವು ಅನುಮೋದನೆಯನ್ನು ನೀಡಿದೆ.:

| | | |
|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | ಅಧ್ಯಕ್ಷರು |
| 2 | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯರು |
| 3) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ನೂಲಿನ ಗಿರಣಿಗಳ ಮಹಾಮಂಡಳ ನಿಯಮಿತ, ಬೆಂಗಳೂರು | ಸದಸ್ಯರು |
| 4) | ಸಂಬಂಧಪಟ್ಟ ಸಹಕಾರಿ ನೂಲಿನ ಗಿರಣಿಗಳ ಅಧ್ಯಕ್ಷರು | ಸದಸ್ಯರು |
| 5) | ಸಂಬಂಧಪಟ್ಟ ಸಹಕಾರಿ ನೂಲಿನ ಗಿರಣಿಗಳ ವ್ಯವಸ್ಥಾಪಕ ನಿರ್ದೇಶಕರು | ಸದಸ್ಯರು |
| 6) | ಜಂಟಿ ನಿರ್ದೇಶಕರು, ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯರು |
| 7) | Infrastructure Leasing & Financial Services Limited (IL & FS Ltd.,) ಸಂಸ್ಥೆಯ ಪ್ರತಿನಿಧಿ, ಬೆಂಗಳೂರು | ಸದಸ್ಯರು |
| 8) | ಸಹಕಾರ ಸಂಘಗಳ ಜಂಟಿ ನಿಬಂಧಕರು (ಜವಳಿ), ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

(ಸಹಕಾರಿ ಸಕ್ಕರೆ)

ಪಿ.ಆರ್. 304

## ತೋಟಗಾರಿಕೆ ಸಚಿವಾಲಯ

## ತಿದ್ದುಪಡಿ ಆದೇಶ

ಸಂಖ್ಯೆ : ತೋಇ 269 ತೋಇವಿ 2009, ಬೆಂಗಳೂರು, ದಿನಾಂಕ: 27–01–2011

ಸರ್ಕಾರದ ಆದೇಶ ಸಂಖ್ಯೆ: ತೋಇ 269 ತೋಇವಿ 2009 ದಿನಾಂಕ: 29–11–2010ರ ಆದೇಶ ಭಾಗದ ತಃಖ್ತೆಯ ಕ್ರಮ ಸಂಖ್ಯೆ: 11ರಲ್ಲಿ Madalapur Horticulture Farm ಎಂಬುದರ ಬದಲಾಗಿ Madapura Horticulture Farm ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಉಳಿದಂತೆ ದಿನಾಂಕ 29–11–2010 ರಂದು ಹೊರಡಿಸಲಾದ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

ಪಿ.ಆರ್. 305

## ಕಂದಾಯ ಸಚಿವಾಲಯ

**ವಿಷಯ** : ಕಂದಾಯ ಇಲಾಖೆಯ ನಾಡಕಛೇರಿಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 239 ಎಎಸ್‌ಜಿ 1980, ದಿನಾಂಕ 10–09–1981.

2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 239 ಎಎಸ್‌ಜಿ 1980 (ಭಾಗ) ದಿನಾಂಕ 11–11–1982.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 93 ಎಎಸ್‌ಡಿ 1986, ದಿನಾಂಕ 14–07–1986.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 364 ಎಎಸ್‌ಡಿ 1986, ದಿನಾಂಕ 12–08–1988.
5. ಸರ್ಕಾರದ ಸಮಸಂಖ್ಯೆಯ ಪತ್ರ, ದಿನಾಂಕ 30–10–2006.

**ಪ್ರಸ್ತಾವನೆ :**

ಕಂದಾಯ ಇಲಾಖೆಯ ಆಡಳಿತವನ್ನು ಬಲಪಡಿಸುವ ದೃಷ್ಟಿಯಿಂದ ಹಾಗೂ ತಾಲ್ಲೂಕು ಹಂತದಲ್ಲಿನ ಅಧಿಕಾರ ವಿಕೇಂದ್ರೀಕರಣಗೊಳಿಸಲು ಸರ್ಕಾರವು ನಾಡಕಛೇರಿಗಳನ್ನು ಆರಂಭಿಸಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ 1 ರಲ್ಲಿ ಓದಲಾದ ಆದೇಶದನ್ವಯ ಪ್ರಾಯೋಗಿಕವಾಗಿ ಗುಡಿಬಂಡೆ, ಚಾಮರಾಜನಗರ ಹಾಗೂ ಚಿಕ್ಕೋಡಿ ತಾಲ್ಲೂಕುಗಳಲ್ಲಿ ನಾಡಕಛೇರಿಗಳನ್ನು ತೆರೆದು ನಂತರ ಈ ಪದ್ಧತಿಯನ್ನು ಮೇಲೆ ಕ್ರಮ ಸಂಖ್ಯೆ : 2 ರಲ್ಲಿ ಓದಲಾದ ಆದೇಶದ ಮೂಲಕ ಗುಲ್ಬರ್ಗ ಜಿಲ್ಲೆಯ 6 ಹೋಬಳಿಗಳಿಗೆ ವಿಸ್ತರಿಸಲಾಯಿತು. ಹಿಂದಿನ ವಿಭಾಗಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳ

ಶಿಫಾರಸ್ಸಿನ ಮೇರೆಗೆ ಮೇಲೆ ಕ್ರಮ ಸಂಖ್ಯೆ : 3 ರಲ್ಲಿ ಓದಲಾದ ಆದೇಶದನ್ವಯ ರಾಜ್ಯದ 167 ಹೋಬಳಿಗಳಲ್ಲಿ ನಾಡಕಛೇರಿಗಳನ್ನು ಪ್ರಾರಂಭಿಸಿ ತದನಂತರ ಮೇಲೆ ಕ್ರಮ ಸಂಖ್ಯೆ : 4 ರ ಆದೇಶದ ಮೂಲಕ ರಾಜ್ಯದ 153 ಹೋಬಳಿಗಳಿಗೆ ನಾಡಕಛೇರಿ ಪದ್ಧತಿಯನ್ನು ವಿಸ್ತರಿಸಲಾಗಿತ್ತು. ಪ್ರಸ್ತುತ ರಾಜ್ಯದ ಒಟ್ಟು 329 ನಾಡಕಛೇರಿಗಳು ಈ ಕೆಳಗಿನಂತೆ ಸಿಬ್ಬಂದಿ ಹಾಗೂ ಅಧಿಕಾರಗಳ ಪ್ರತ್ಯಾಯೋಜನೆಯೊಂದಿಗೆ ಕಾರ್ಯ ನಿರ್ವಹಿಸುತ್ತಿರುತ್ತವೆ.

**ಸಿಬ್ಬಂದಿ**

| | | |
|---|---|---|
| 1 | ಉಪತಹಶೀಲ್ದಾರ್ | 1 |
| 2 | ದ್ವಿತೀಯ ದರ್ಜೆ ಸಹಾಯಕರು | 1 |
| 3 | ಬೆರಳಚ್ಚುಗಾರರು | 1 |
| 4 | ಡಿ–ದರ್ಜೆ | 1 |

**ನಾಡಕಚೇರಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರಗಳು**

| | |
|---|---|
| 1 | ವೃದ್ಧಾಪ್ಯ ವೇತನ ಮಂಜೂರಾತಿ |
| 2 | ವಿಧವಾ ವೇತನ ಮಂಜೂರಾತಿ |
| 3 | ಅಂಗವಿಕಲರಿಗೆ ಭತ್ಯೆ ಮಂಜೂರಾತಿ |
| 4 | ಸರ್ಕಾರಿ ಬಾಕಿ ವಸೂಲಾತಿ ಮತ್ತು ಜಮ ಹಾಗೂ ಡಿಸಿಬಿ ಲೆಕ್ಕಗಳ ನಿರ್ವಹಣೆ |
| 5 | ಪ್ರವಾಹ ಮತ್ತು ಬೆಂಕಿ ಅಪಘಾತಗಳಲ್ಲಿ ನೊಂದವರಿಗೆ ಪರಿಹಾರ ಧನ ನೀಡುವಿಕೆ |
| **6** | ದೃಢೀಕರಣ ಪತ್ರ |
| 7 | ಅಧಿಕೃತ ವ್ಯವಸಾಯಗಾರರಿಗೆ ದೃಢೀಕರಣ ಪತ್ರ ನೀಡುವಿಕೆ. |
| 8 | ಮುಜರಾಯಿ ಸಂಸ್ಥೆಗಳ ನಿರ್ವಹಣೆ ಮತ್ತು ತನಿಖೆ |
| 9 | ದರಖಾಸ್ತು ರೆಕಾರ್ಡ್‌ಗಳ ತಯಾರಿಕೆ |
| 10 | ಗ್ರಾಮಲೆಕ್ಕಿಗರ ಮತ್ತು ಕಂದಾಯ ನಿರೀಕ್ಷಕರುಗಳ ಕಚೇರಿ ಮತ್ತು ಕಚೇರಿ ಪುಸ್ತಕಗಳ ತನಿಖೆ |
| 11 | ಸ್ವಾಧೀನ ಪ್ರಕರಣಗಳ ಕಡತಗಳ ತಯಾರಿಕೆ |
| 12 | ಜನನ ಮತ್ತು ಮರಣ ದಾಖಲೆಗಳ ನಿರ್ವಹಣೆ |
| 13 | ಗ್ರಾಮಲೆಕ್ಕಿಗರು ಮತ್ತು ಸ್ವಾಧೀನದಲ್ಲಿರುವ ಮತ್ತಿತರರಿಗೆ ಸಾಂದರ್ಭಿಕ ರಜೆ |
| 14 | ಹಸಿರು ಮತ್ತು ಕೆಂಪು ಪಡಿತರ ಕಾರ್ಡುಗಳ ನೀಡಿಕೆ |
| 15 | ಸಣ್ಣ, ಅತಿಸಣ್ಣ ರೈತರಿಗೆ ಧೃಡೀಕೃತ ಪತ್ರ ನೀಡುವಿಕೆ |
| 16 | ಗ್ರಾಮಲೆಕ್ಕಿಗರ ಕೈ ಪುಸ್ತಕದ ಪುಟ 3(15) ರೀತ್ಯ ಗ್ರಾಮದ ಅಂಕಿ ಅಂಶಗಳನ್ನು ನಾಡ ಕಛೇರಿಯಲ್ಲಿ ನಿರ್ವಹಿಸುವ ಬಗ್ಗೆ |
| 17 | ಪ್ರತಿವರ್ಷ 10 ಪ್ರತಿಶತ ಹಳ್ಳಿಗಳಲ್ಲಿ 2 ಮುಖ್ಯ ಬೆಳೆ ಕಟಾವು ಪ್ರಯೋಗಗಳನ್ನು ಮಾಡುವುದು. |
| 18 | ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 94, 104, 127, 129, ಮತ್ತು 164 ರಡಿ ಕ್ರಮ ತೆಗೆದುಕೊಳ್ಳುವ ಅಧಿಕಾರ |

ಕರ್ನಾಟಕ ಆಡಳಿತ ಸುಧಾರಣೆ ಆಯೋಗವು ತನ್ನ ವರದಿಯಲ್ಲಿ ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ನಾಡಕಛೇರಿಗಳನ್ನು ರದ್ದುಗೊಳಿಸಲು ಹಾಗೂ ನಾಡಕಛೇರಿಗಳ ರದ್ದತಿಯಿಂದಾಗಿ ಕಂದಾಯ ಇಲಾಖಾ ನೌಕರರು ಮುಂಬಡ್ತಿ ಅವಕಾಶದಿಂದ ವಂಚಿತರಾಗದಿರಲು ರಾಜ್ಯದ ಹೋಬಳಿ ಮಟ್ಟದಲ್ಲಿರುವ ಕಂದಾಯ ನಿರೀಕ್ಷಕರ ಹುದ್ದೆಗಳನ್ನು ಮೇಲ್ದರ್ಜೆಗೇರಿಸಲು ಶಿಫಾರಸ್ಸು ಮಾಡಿ ನಾಡಕಛೇರಿಗಳನ್ನು ರದ್ದುಪಡಿಸುವುದರಿಂದ ಸದರಿ ಕಛೇರಿಗಳಿಗೆ ಮಂಜೂರಾದ ಹುದ್ದೆಗಳನ್ನು ಹೆಚ್ಚುವರಿ ಹುದ್ದೆಗಳೆಂದು ಪರಿಗಣಿಸಿ ಈ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಜಿಲ್ಲಾಡಳಿತದ ನಿಯಂತ್ರಣದಲ್ಲಿರುವ ಕಛೇರಿಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಸ್ಥಳಾವಕಾಶ ಕಲ್ಪಿಸಲು ಸೂಚಿಸಿದ್ದರ ಮೇರೆಗೆ ದಿನಾಂಕ 12–02–2003 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಾಡಕಛೇರಿಗಳನ್ನು ರದ್ದುಪಡಿಸುವ ಕುರಿತು ಚರ್ಚಿಸಿ ಆಡಳಿತ ಸುಧಾರಣಾ ಆಯೋಗದ ಸೂಚನೆಯಂತೆ ನಾಡಕಛೇರಿಗಳನ್ನು ರದ್ದುಪಡಿಸಲು ಶಿಫಾರಸ್ಸು ಮಾಡಲಾಗಿತ್ತು. ಅದರಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯೂ ಸಹ ನಾಡಕಛೇರಿಗಳನ್ನು ರದ್ದುಗೊಳಿಸಲು ಸಹಮತಿ ವ್ಯಕ್ತಪಡಿಸಿತ್ತು.

ಸಾರ್ವಜನಿಕರು ತಾಲ್ಲೂಕು ಕಛೇರಿಗಳನ್ನು ಸಂಪರ್ಕಿಸುವ ಬದಲಾಗಿ ವೃದ್ಯಾಪ್ಯ ವೇತನ, ವಿಧವಾ ವೇತನ, ಆದಾಯ ಪ್ರಮಾಣ ಪತ್ರ ಹಾಗೂ ಇತರೆ ಸಂಕೀರ್ಣ ಪ್ರಮಾಣ ಪತ್ರಗಳನ್ನು ಹೋಬಳಿ ಮಟ್ಟದಲ್ಲಿಯೇ ಪಡೆಯುವುದರಿಂದಾಗಿ ವಿಶೇಷವಾಗಿ ಬಡ ಕುಟುಂಬಗಳಿಗೆ ಅತ್ಯಗತ್ಯವಾದ ಸಮಯ ಮತ್ತು ಶಕ್ತಿ ಉಳಿತಾಯವಾಗುವುದರಿಂದ ಗಣಕೀಕೃತ ಪಹಣಿಗಳನ್ನು ವಿಳಂಬಕ್ಕೆ ಅವಕಾಶ ಕಲ್ಪಿಸದೆ ರೈತರಿಗೆ/ ಸಾರ್ವಜನಿಕರಿಗೆ ಒದಗಿಸಲು ಭೂಮಿ ಕಿಯೋಸ್ಕ್‌ಗಳನ್ನು ಪ್ರಾರಂಭಿಸಿ ನಾಡಕಛೇರಿಗಳನ್ನು ಮುಂದುವರೆಸುವ ಪ್ರಸ್ತಾವನೆಯ ಬಗ್ಗೆ ದಿನಾಂಕ 27–07–2006 ರಂದು ಸರ್ಕಾರದ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಹಾಗೂ ಕಂದಾಯ ಇಲಾಖೆಯ ಅಧಿಕಾರಿಗಳೊಂದಿಗೆ ವಿಸ್ತಾರವಾಗಿ ಚರ್ಚೆ ನಡೆಸಿ ನಾಡಕಛೇರಿಗಳನ್ನು ಒಂದು ವರ್ಷ ಮುಂದುವರೆಸಿ, ಈ ಒಂದು ವರ್ಷದ ಅವಧಿಯಲ್ಲಿ ನಾಡಕಛೇರಿಗಳ ಕಾರ್ಯ ನಿರ್ವಹಣೆ ಕುರಿತು ಜಿಲ್ಲಾಧಿಕಾರಿಗಳಿಂದ ವರದಿ ಪಡೆದು ಪ್ರಸ್ತಾವನೆ ಸಲ್ಲಿಸಲು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : 5 ರ ಪತ್ರದಲ್ಲಿ ತಮ್ಮ ಜಿಲ್ಲಾ ವ್ಯಾಪ್ತಿಗೆ ಒಳಪಡುವ ಹಾಗೂ ಕಾರ್ಯ ನಿರ್ವಹಿಸುತ್ತಿರುವ ನಾಡಕಛೇರಿಗಳ ಕಾರ್ಯವನ್ನು ಕೂಲಂಕಷವಾಗಿ ಸಮೀಕ್ಷೆ ಮಾಡಿ ಸದರಿ ನಾಡಕಛೇರಿಗಳನ್ನು ಮುಂದುವರೆಸುವ/ರದ್ದುಪಡಿಸುವ ಬಗ್ಗೆ ಸರ್ಕಾರಕ್ಕೆ ತಮ್ಮ ಸ್ಪಷ್ಟವಾದ ವರದಿ ನೀಡುವಂತೆ ಎಲ್ಲಾ ಜಿಲ್ಲಾಧಿಕಾರಿಗಳನ್ನು ಕೋರಿದ್ದರ ಮೇರೆಗೆ ಜಿಲ್ಲಾಧಿಕಾರಿಗಳು ನೀಡಿದ ವರದಿಯ ಆಧಾರದ ಮೇಲೆ ಸಾರ್ವಜನಿಕರಿಗೆ ಬೇರುಮಟ್ಟದ ಆಡಳಿತ ಸೌಲಭ್ಯ ಒದಗಿಸುವ ಹಾಗೂ ತಾಲ್ಲೂಕು ಮಟ್ಟದಲ್ಲಿ ಅಧಿಕಾರ ವಿಕೇಂದ್ರೀಕರಣಗೊಳಿಸುವ ಹಿತದೃಷ್ಟಿಯಿಂದ ಕಂದಾಯ ಇಲಾಖೆಯು ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಮರುಪರಿಶೀಲಿಸಲು ತೀರ್ಮಾನಿಸಿ ಜಿಲ್ಲಾಧಿಕಾರಿಗಳ ಅಭಿಪ್ರಾಯದಂತೆ ಹೋಬಳಿ ಮಟ್ಟದಲ್ಲಿ ಭೂಮಿ ಕಿಯೋಸ್ಕ್ (KIOSK) ಗಳನ್ನು ಪ್ರಾರಂಭಿಸಿ ಹೆಚ್ಚಿನ ಅಧಿಕಾರಗಳನ್ನು ಪ್ರತ್ಯಾಯೋಜಿಸುವುದರ ಮೂಲಕ ನಾಡಕಛೇರಿಗಳನ್ನು ಮುಂದುವರೆಸಲು ತೀರ್ಮಾನಿಸಲಾಯಿತು.

ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ 372 ವೆಚ್ಚ –7/2010, ದಿನಾಂಕ 14–05–2010ರಲ್ಲಿ ನಾಡಕಛೇರಿಗಳನ್ನು ಮುಂದುವರೆಸುವ ಕಂದಾಯ ಇಲಾಖೆಯ ಪ್ರಸ್ತಾವನೆಗೆ ಸಹಮತಿ ನೀಡಿದ್ದರ ಮೇರೆಗೆ ಹಾಗೂ ಶ್ರೀ ಎಂ..ಪಿ. ಪ್ರಕಾಶ್ ಇವರ ಅಧ್ಯಕ್ಷತೆಯ ತಾಲ್ಲೂಕು ಪುನರ್‌ರಚನಾ ಸಮಿತಿಯು ಸಹ ನಾಡಕಛೇರಿಗಳನ್ನು ಮುಂದುವರೆಸಲು ಶಿಫಾರಸ್ಸು ಮಾಡಿದ್ದರ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ 1ನೇ ಅನುಸೂಚಿಯ 33ನೇ ಅಂಶದನ್ವಯ ನಾಡಕಛೇರಿಗಳನ್ನು ಮುಂದುವರೆಸಲು ಸಚಿವ ಸಂಪುಟದ ಅನುಮೋದನೆ ಪಡೆದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ/375/ಬಿಎಂಎಂ/2002, ಬೆಂಗಳೂರು, ದಿನಾಂಕ: 18–1–2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ 329 ನಾಡಕಛೇರಿಗಳನ್ನು ರದ್ದುಪಡಿಸಬೇಕೆಂಬ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸನ್ನು ಕೈಬಿಟ್ಟು ಪ್ರತಿ ನಾಡಕಛೇರಿಯಲ್ಲಿ ಭೂಮಿ ಕಿಯೋಸ್ಕ್ (KIOSK) ಗಳನ್ನು ಪ್ರಾರಂಭಿಸುವುದರೊಂದಿಗೆ ಅವುಗಳಿಗೆ ಸಂಬಂಧಿಸಿದ ಎಲ್ಲಾ ಕೆಲಸಗಳ ಮೇಲ್ವಿಚಾರಣೆ ಹಾಗೂ ನಿರ್ವಹಣೆಗಳ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ 329 ನಾಡಕಛೇರಿಗಳನ್ನು ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು ಎ)

ಪಿ.ಆರ್. 307

## ENERGY SECRETARIAT

**Sub:** Allotment of 24.75 MW Mouneshwar mini hydel scheme to M/s Lakshmi Jalavidyut (Krishna) Limited-reg.

**Read :**

1. Letters No. KRED/06/Mouneshwar SHP/09/1400, dated : 23/28-3-2009 and No : KRED/06/Mouneshwar MHS/2009/3052 dated: 14/16-9-2009 received from the Managing Director, Karnataka Renewable Energy Development Limited, Bangalore.
2. Proceedings of the Allotment Committee Meeting Dated : 23-10-2009.
3. Government letter No. : EN 299 NCE 2009, dated : 7-12-2009.
4. Letter No. : KRED/06/Mouneshwar MHS/2010/826, dated : 23/24-3-2010 received from the Managing Director, Karnataka Renewable Energy Development Limited, Bangalore.
5. Proceedings of the Allotment Committee Meeting dated : 26-3-2010
6. Proceedings of the meeting held to review the presentation given by the Small Hydro/Wind Developers dated : 27-5-2010.
7. Proceedings of the Allotment Committee Meeting dated : 6-8-2010.
8. Endorsement letter No. : EN 299 NCE 2009 dated : 26-10-2010.
9. Government letter No. : EN 406 NCE 2009, dated : 27-11-2010.
10. Letter No. : KRED/06/SH-690/Mouneshwar MHS/2010/233 dated : 30-12-2010/14-1-2011 received from the Managing Director, Karnataka Renewable Energy Development Limited, Bangalore.

**Preamble :**

In the letter read at (1) above, the Managing Director, Karnataka Renewable Energy Development Limited, Bangalore had recommended for allotment of 24.75 MW capacity Mouneshwara small hydro scheme across Krishna river near Benchanagaddi village, Shorapur Taluk in favour of M/s Lakshmi Jalavidyut Private Limited.

**21. AUDITING OF ACCOUNTS OF EDC, VFDF AND VDF**

The accounts shall be got audited by the Management Committee of the EDC after the closure of every financial year. For this purpose the Management Committee of the EDC shall place a formal request not later than the last day of the month of April of the following year before the DCF/ACF concerned to have the accounts audited through authorized auditors. Upon this, the DCF/ACF shall arrange to have the accounts audited either through any registered auditors not later than the last date of the month of July of the following financial year. After the auditing of accounts, the Management Committee shall place the audited accounts before the General Body meeting of EDC not later than the last date of the month of September of the following year and obtain its formal approval. Audited account shall be sent to the jurisdictional RFO and DCF/ACF within one month thereafter.

**P.R. KALAVATHI**
Under Secretary to Government,
Forest, Ecology and Environment Department

PR. 333

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾಲಯ ಇಲಾಖಾ ಕ್ಷೇತ್ರೀಯ ಕಛೇರಿ ಚಾಮರಾಜನಗರ ಮತ್ತು ಹಾವೇರಿ ಉಪ ವಿದ್ಯುತ್ ಪರಿವೀಕ್ಷಕರ ಕಛೇರಿಗಳಿಗೆ ದೂರವಾಣಿ ಸೌಲಭ್ಯವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :**
1. ಮು.ವಿ.ಪ. ರವರ ಪತ್ರ ಸಂಖ್ಯೆ : ಮುವಿಪ/ಸಿಸ2/ದೂರವಾಣಿ/7136/10–11, ದಿನಾಂಕ : 5–6–2010.
2. ಪತ್ರ ಸಂಖ್ಯೆ : ಉಮುವಿಪ/ಮೈ/ದೂರವಾಣಿ/2652/09–10, ದಿನಾಂಕ : 18–1–2010.
3. ಪತ್ರ ಸಂಖ್ಯೆ : ಉವಿಪ/ಹಾ/ದೂರವಾಣಿ ಸೌಲಭ್ಯ/1710–11/09–10, ದಿನಾಂಕ : 20–3–2010.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಚಾಮರಾಜನಗರ ಮತ್ತು ಹಾವೇರಿ ಉಪ ವಿಭಾಗಗಳ ಕಛೇರಿಗಳಿಗೆ ದೂರವಾಣಿಯನ್ನು ಅಳವಡಿಸಲು ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ಮೇಲೆ ಕ್ರಮಾಂಕ (2) ಮತ್ತು (3)ರ ಪತ್ರಗಳಲ್ಲಿ ಕ್ರಮವಾಗಿ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಮೈಸೂರು ವೃತ್ತ, ಮೈಸೂರು ಹಾಗೂ ಉಪ ವಿದ್ಯುತ್ ಪರಿವೀಕ್ಷಕರು, ಹಾವೇರಿ ಇವರುಗಳು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 70 ಇಬಿಎಸ್ 2010, ಬೆಂಗಳೂರು, ದಿನಾಂಕ : 2–2–2011.**

ಚಾಮರಾಜನಗರ ಮತ್ತು ಹಾವೇರಿ ಉಪ ವಿಭಾಗಗಳ ಕಛೇರಿಗಳಿಗೆ ತಲಾ ಒಂದರಂತೆ ಸ್ಥಿರ ದೂರವಾಣಿ ಸೌಲಭ್ಯವನ್ನು ಅಳವಡಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1206/ವೆಚ್ಚ–1/2010, ದಿನಾಂಕ : 14–10–2010 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುಜಾತಮ್ಮ**
ಪೀಠಾಧಿಕಾರಿ, ಇಂಧನ ಇಲಾಖೆ.

ಪಿ. ಆರ್. 334

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ಕಲಗೆರೆ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ : ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/2010–11/2614, ದಿನಾಂಕ : 20–12–2010.

**ಪ್ರಸ್ತಾವನೆ :**

ರಾಮನಗರ ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು ಕಲಗೆರೆ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಕಲಗೆರೆ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ರಾಮನಗರ ದಿನಾಂಕ : 26–8–2005 ರಂದು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 20–12–2010ರ ಪತ್ರದಲ್ಲಿ ಕೋರಿರುತ್ತಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 27–11–1997 ರ ಪ್ರಕಾರ ಭೂಸ್ವಾಧೀನಕ್ಕೆ ಒಳಪಟ್ಟ ಭೂಮಾಲೀಕರು ದಿನಾಂಕ : 22–5–2000 ರಂದು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರಡಿ ರಾಮನಗರ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ : 9/2001 ನ್ನು ದಾಖಲಿಸಿದ್ದಾರೆ. ಸಿವಿಲ್ ನ್ಯಾಯಾಲಯವು ದಿನಾಂಕ : 26–8–2005 ರಂದು ನೀಡಿದ ಆದೇಶದಲ್ಲಿ ಈ ಜಮೀನಿನ ಮಾರುಕಟ್ಟೆ ಬೆಲೆಯನ್ನು ರೂ. 92,000/–ಗಳಿಗೆ ನಿಗದಿಪಡಿಸಿದೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ.

(ರೂ. ಗಳಲ್ಲಿ)

| ಕ್ರಮ ಸಂಖ್ಯೆ | ಎಲ್.ಎ.ಸಿ. ಸಂಖ್ಯೆ | ಕಲಗೆರೆ ಗ್ರಾಮದ ಸರ್ವೆ ನಂಬರ್ | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 9/01 | 42/9 | 1–18 | 298669 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಂದಾಯ ಇಲಾಖೆ ಪತ್ರ ಸಂಖ್ಯೆ : ಆರ್‌ಡಿ 681 ಎಲ್‌ಸಿಎ 2010, ದಿನಾಂಕ : 9–11–2010ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 154 ಭೂಸ್ವಾಪ್ರ 2010,**
**ಬೆಂಗಳೂರು, ದಿನಾಂಕ : 1–2–2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕು ಕಲಗೆರೆ ಗ್ರಾಮಕ್ಕೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯ ಅನುಸಾರ ಪರಿಹಾರ ಮೊತ್ತ ರೂ. 2,98,669–00 (ಎರಡು ಲಕ್ಷದ ತೊಂಭತ್ತೆಂಟು ಸಾವಿರದ ಆರು ನೂರ ಆರವತ್ತೊಂಭತ್ತು ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಜಮೀನನ್ನು ಕಂದಾಯ ದಾಖಲೆಗಳಲ್ಲಿ ಇಂಡೀಕರಿಸಿ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ : 20/10/2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದ ಅನ್ವಯ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ. ಆರ್. 335

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಶ್ರೀಮತಿ ಚಂಪಾ. ಇ. ಸೀನಿಯರ್ ಪ್ರೋಗ್ರಾಮರ್, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರನ್ನು ದಿನಾಂಕ : 4–2–2011 ರಂದು ನವದೆಹಲಿಯಲ್ಲಿ ನಡೆಯುವ ತರಬೇತಿಗೆ ನಿಯೋಜಿಸುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನ, ಮಂತ್ರಾಲಯ ಭಾರತ ಸರ್ಕಾರ, ನವದೆಹಲಿ (ಸಿಇಆರ್‌ಟಿ–ಇನ್), ಇವರ ಇ–ಮೇಲ್ ದಿನಾಂಕ : 30–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 30–12–2010ರ ಇ–ಮೇಲ್‌ನಲ್ಲಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ (ಸಿಇಆರ್‌ಟಿ–ಇನ್), ಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನ, ಮಂತ್ರಾಲಯ ಭಾರತ ಸರ್ಕಾರ, ನವದೆಹಲಿ ಇವರ ವತಿಯಿಂದ "Database Server Security" ಎಂಬ ವಿಷಯದಲ್ಲಿ ದಿನಾಂಕ : 4–2–2011 ರಂದು ಇರುವ ತರಬೇತಿಗೆ ನಾಮ ನಿರ್ದೇಶನ ಮಾಡಲು ಕೋರಿರುತ್ತಾರೆ. ಪ್ರಯುಕ್ತ ಶ್ರೀಮತಿ ಚಂಪಾ.ಇ. ಸಿನಿಯರ್ ಪ್ರೋಗ್ರಾಮರ್, ಮಾಹಿತಿ ತಂತ್ರಜ್ಞಾನ ನಿರ್ದೇಶನಾಲಯ ಬೆಂಗಳೂರು ಇವರನ್ನು ನಿಯೋಜಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 06 ಡಿಐಎಸ್ 2011, ಬೆಂಗಳೂರು, ದಿನಾಂಕ : 2–2–2011.**

ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ತಂತ್ರಜ್ಞಾನ ನಿರ್ದೇಶನಾಲಯದ ಸೀನಿಯರ್ ಪ್ರೋಗ್ರಾಮರ್, ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಚಂಪಾ.ಇ. ಇವರನ್ನು ನವದೆಹಲಿಯಲ್ಲಿ ನಡೆಯುವ ದಿನಾಂಕ : 4–2–2011 ರಂದಿನ "Database Server Secutity" ತರಬೇತಿಗೆ ಹಾಜರಾಗಿ ಹಿಂದಿರುಗುವುದಕ್ಕೆ ಅನುಮೋದನೆ ನೀಡಲಾಗಿದೆ.

ಸದರಿ ಅಧಿಕಾರಿಗಳ ದಿನಾಂಕ : 4–2–2011ರ ಪ್ರವಾಸದ ಅವಧಿಯ ಗೈರುಹಾಜರಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಲಾಗಿದೆ ಹಾಗೂ ಸದರಿ ಪ್ರಯಾಣಕ್ಕೆ ಕೆಸಿಎಸ್‌ಆರ್ ನಿಯಮಾವಳಿ ಪ್ರಕಾರ ಲಭ್ಯವಿರುವ ರೈಲು ಪ್ರಯಾಣ ಭತ್ಯೆ, ದಿನ ಭತ್ಯೆ ಪಡೆಯಲು ಅಧಿಕಾರಿಯವರು ಅರ್ಹರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ. ಆರ್. 336

## FOREST, ECOLOGY AND ENVIRONMENT SECRETARIAT

**Sub:** Diversion of 0.688 ha. of Deemed forest land in Sy.No. 94 P1 of Senapura Village, Kundapura Taluk for construction of 110/33/11 K.V.S/C line on D/C Towers from Kundapur sub-station to Navunda sub-station in favour of the Executive Engineer (Elect), Major Works Division, Udupi KPTCL, Kavoor, Mangalore.

**Read :** 1. Letter No. A5(2) GFL.CR.39/10-11, dated : 29-11-2010 of Principal Chief Conservator of Forest, Bangalore.

2. Government of India letter No. F.No. 11-9/98-FC, dated : 16-10-2000, 21-11-2005, 26-12-2007 and 11-9-2009.

**PREAMBLE :**

The Principal Chief Conservator of Forests, Bangalore vide his letter dated 29-11-2010 read at (1) above has submitted the proposal for diversion of 0.688 ha. of forest land in Sy. No. 94P1 of Senapura Village, Kundapura Taluk for construction of 110/33/11 KV S/C line on D/C Towers from Kundapura sub-station to the proposed 110/33 KV sub-station at Navunda in Senapura village in favour of the Executive Engineer (Elect), Major Works Division, Udupi, KPTCL, Kavoor, Managalore under the Forest (conservation) Act, 1980, subject to certain conditions.

This proposal has been examined as per the general approval of Government of India in its letter dated : 16-10-2000, 21-11-2005, 26-12-2007 and 11-9-2009. And it has been decided to accord sanction for diversion of 0.688 ha. of forest land under the Forest (Conservation) Act, 1980. The proposal has been examined in detail and hence the order.

**GOVERNMENT ORDER NO. FEE 153 FGL 2010, BANGALORE, DATED : 28-1- 2011.**

In the circumstances explained in the preamble above and in accordance with the general approval given by Government of India in their letters dated : 16-10-2000, 21-11-2005, 26-12-2007 and 11-9-2009, Government is pleased to accord approval under Forest (Conservation) Act, 1980 for diversion of 0.688 ha. of forest land in Sy.No. 94P1 of Senapura Village, Kundapura Taluk for construction of 110/33/11 KV S/C line on D/C Towers from Kundapura sub-station to the proposed 110/33 KV sub-Station at Navunda in Senapura village in favour of the Executive Engineer (Elect), Major Work Division, Udupi, KPTCL, Kavoor, Mangalore under the Forest (Conservation) Act, 1980, subject to the following conditions.

1. The legal status of the forest land shall continue to be forest land.
2. The lease is for a period of 30 years.
3. The land shall be utilized for the purpose for which it is released.
4. The user agency has to pay the lease rent as fixed by the Government at the time of sanction and any subsequent orders in this regard.
5. In case the forest land is not used for the stipulated purpose or when it is no longer needed for the stipulated purpose, the area should automatically revert to the Karnataka Forest Department.
6. The User Agency should not sub-lease, mortgage and hypothecate the forest area.
7. Only minimum number of trees shall be cut based on actual requirement of the project.
8. The User Agency shall pay the extraction and transportation charges of trees as estimated by the Deputy Conservators of Forests from the proposed forest land.
9. The user agency has to pay the Net Present Value (NPV) as per the Orders dated : 28-3-2008 and 9-5-2008 of the Hon'ble Supreme Court of India.
10. The Karnataka Forest Act, 1963 and Rules, 1969 and other relevant Acts and Rules will applicable for any violation.
11. The User Agency shall abide by all the conditions imposed upon by the Government of India/State Government/Principal Chief Conservator of Forests, Bangalore.

By Order and in the name of the Governor of Karnataka

**H.M. MALLIKARJUNA SWAMY**

Under Secretary to Government

Forest, Ecology and Environment Department.

P.R. 337

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು ಪರಿಷ್ಕರಿಸಿ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಅಪಜೀ 63 ಎಫ್‌ಎಸ್‌ಡಬ್ಲ್ಯೂ 2007, ದಿನಾಂಕ : 24–11–2007.

2. ಸರ್ಕಾರಿ ಆದೇಶ ಸಂಖ್ಯೆ : ಅಪಜೀ 67 ಎಫ್‌ಎಸ್‌ಡಬ್ಲ್ಯೂ 2009, ದಿನಾಂಕ : 6–2–2010.

3. ಸರ್ಕಾರಿ ಆದೇಶ ಸಂಖ್ಯೆ : ಅಪಜೀ 24 ಎಫ್‌ಎಸ್‌ಡಬ್ಲ್ಯೂ 2010, ದಿನಾಂಕ : 19–6–2010.

4. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರ ಪತ್ರ ಸಂಖ್ಯೆ : ಎ6/ಎಸ್‌ಡಿಎಲ್/ಚಿಮಾ/ಸಿಆರ್–36/ 2009–10, ದಿನಾಂಕ : 28–9–2010/4–10–2010.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ಸಾರ್ವಜನಿಕ ಉದ್ಯಮಗಳು, ಧಾರ್ಮಿಕ ಮತ್ತಿತರ ಸಂಸ್ಥೆಗಳು ಹಾಗೂ ಸಾರ್ವಜನಿಕರಿಗೆ ನೀಡಲು ಶ್ರೀಗಂಧದ ಚಿಲ್ಲರೆ ಮಾರಾಟದ ಬೆಲೆಯನ್ನು ಸರ್ಕಾರವು ಆಗಿಂದ್ದಾಗ್ಗೆ ಹೊರಡಿಸಿದ ಆದೇಶಗಳಲ್ಲಿ ನಿಗದಿಪಡಿಸಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆಯ (1) ರಿಂದ

(3) ರ ದಿನಾಂಕ : 24–11–2007, 6–2–2010 ಮತ್ತು 19–6–2010ರ ಆದೇಶಗಳಲ್ಲಿ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು 2007–08 ಮತ್ತು 2009–10ನೇ ಸಾಲಿಗೆ ಪರಿಷ್ಕರಿಸಿ ನಿಗದಿಪಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ : 28–9–2010/4–10–2010 2010–11ನೇ ಸಾಲಿಗೆ ಶ್ರೀಗಂಧದ ಚಿಲ್ಲರೆ ಮಾರಾಟ ದರವನ್ನು ಪರಿಷ್ಕರಿಸಿ ನಿಗದಿಪಡಿಸಲು ವಿವಿಧ ವರ್ಗದ ಶ್ರೀಗಂಧಕ್ಕೆ ರಾಜ್ಯದ ವಿವಿಧ ಸರ್ಕಾರಿ ಶ್ರೀಗಂಧದ ಕೋಠಿಗಳಲ್ಲಿ ನಡೆದ ಕಳೆದ 2 ಹರಾಜುಗಳಲ್ಲಿ ದೊರಕಿದ ದರಗಳ ಅನ್ವಯ ಸರಾಸರಿ ದರವನ್ನು ಕಂಡು ಹಿಡಿದು ಸದರಿ ಸರಾಸರಿ ದರವನ್ನು ಮಾರುಕಟ್ಟೆ ದರವೆಂದು ಪರಿಗಣಿಸಿ, ಈ ಮಾರುಕಟ್ಟೆ ದರವನ್ನು 2009–10ನೇ ಸಾಲಿನಲ್ಲಿ ವಿವಿಧ ವರ್ಗಗಳ ಶ್ರೀಗಂಧಕ್ಕೆ ಸರ್ಕಾರವು ನಿಗದಿಪಡಿಸಿದ ಚಿಲ್ಲರೆ ಮಾರಾಟ ದರಗಳೊಂದಿಗೆ ಹೋಲಿಕೆ ಮಾಡಲಾಗಿದೆ. 2010–11 ನೇ ಸಾಲಿಗೆ ವಿವಿಧ ವರ್ಗಗಳ ಶ್ರೀಗಂಧಕ್ಕೆ ಚಿಲ್ಲರೆ ಮಾರಾಟ ದರವನ್ನು ನಿಗಧಿಪಡಿಸಲು ಕೆಲವು ಮಾನ ದಂಡಗಳನ್ನು ಅನುಸರಿಸಿ 2010–11ನೇ ಸಾಲಿಗೆ ಅಥವಾ ಮುಂದಿನ ಆದೇಶದವರೆಗೆ ಚಿಲ್ಲರೆ ಮಾರಾಟ ದರವನ್ನು ನಿಗಧಿಪಡಿಸಿ ಆದೇಶ ಹೊರಡಿಸಲು ಹಾಗೂ ಪರಿಷ್ಕೃತ ದರವನ್ನು ಸರ್ಕಾರ ನಿಗದಿಪಡಿಸುವ ದಿನಾಂಕದವರೆಗೆ ಕಳೆದ ವರ್ಷಕ್ಕೆ ಮಂಜೂರಾದ ದರವನ್ನೇ ಮುಂದುವರೆಸಲು ಆದೇಶಿಸಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು ಪ್ರತಿ ಮೆಟ್ರಿಕ್ ಟನ್‌ಗೆ ₹. ಲಕ್ಷಗಳಲ್ಲಿ ಪರಿಷ್ಕರಿಸಲು ನಿರ್ಧರಿಸಿ ಮತ್ತು ಪರಿಷ್ಕೃತ ದರವನ್ನು 2010–11ನೇ ಸಾಲಿಗೆ ಅಥವಾ ಮುಂದಿನ ಆದೇಶದವರೆಗೆ ನಿಗದಿಪಡಿಸಿ, ಅದರೊಂದಿಗೆ ಪರಿಷ್ಕೃತ ದರ ಆದೇಶ ಜಾರಿಗೆ ಬಂದ ದಿನಾಂಕದವರೆಗೆ ಕಳೆದ ವರ್ಷಕ್ಕೆ ಮಂಜೂರಾದ ದರವನ್ನೇ ಮುಂದುವರೆಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 76 ಎಫ್‌ಎಸ್‌ಡಬ್ಲ್ಯೂ 2010, ಬೆಂಗಳೂರು, ದಿನಾಂಕ : 31–1–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀಗಂಧದ ಚಿಲ್ಲರೆ ಮಾರಾಟ ದರಗಳನ್ನು 2010–11ನೇ ಸಾಲಿಗೆ ಪರಿಷ್ಕರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೂ ನಿಗದಿಪಡಿಸಿದೆ ಹಾಗೂ ಪರಿಷ್ಕೃತ ದರ ಆದೇಶ ಜಾರಿಗೆ ಬಂದ ದಿನಾಂಕದವರೆಗೆ ಕಳೆದ ವರ್ಷಕ್ಕೆ ಮಂಜೂರಾದ ದರವನ್ನೇ ಮುಂದುವರೆಸುವಂತೆ ಆದೇಶಿಸಲಾಗಿದೆ.

| ಕ್ರ.ಸಂ. | ಶ್ರೀಗಂಧದ ವರ್ಗ | 2010–11ನೇ ಸಾಲಿಗೆ ನಿಗದಿಪಡಿಸಿದ್ದ ಚಿಲ್ಲರೆ ಮಾರಾಟ ದರ ಪ್ರತಿ ಮೆಟ್ರಿಕ್ ಟನ್‌ಗೆ ₹. ಲಕ್ಷಗಳಲ್ಲಿ |
|---|---|---|
| ಹಾರ್ಟ್‌ವುಡ್ | | |
| 1. | ವಿಲಾಯತ್ ಬುಧ್ (ಬಿಲೆಟ್ಸ್–I) | 41.00 |
| 2. | ಚೈನಾ ಬುಧ್ (ಬಿಲೆಟ್ಸ್– II) | 41.00 |
| 3. | ಪಂಜಾಂ (ಬಿಲೆಟ್ಸ್– III) | 37.00 |
| 4. | ಘೋಟ್ಲಾ | 41.00 |
| 5. | ಘಟಬಡಲಾ | 41.00 |
| 6. | ಬಗರ್‌ದಾದ್ | 39.50 |
| 7. | ರೂಟ್– I | 36.25 |
| 8. | ರೂಟ್– II | 37.40 |
| 9. | ರೂಟ್– III | 33.70 |
| 10. | ಜಜ್‌ಪೋಕಲ್– I | 40.75 |
| 11. | ಜಜ್‌ಪೋಕಲ್– II | 37.10 |
| 12. | ಐನ್‌ಬಗರ್ | 40.10 |
| 13. | ಚೆರಿಯಾ | 32.20 |
| 14. | ಐನ್‌ಚಿಲ್ಟಾ | 28.20 |
| 15. | ಹತ್ರಿಚಿಲ್ಟಾ | 19.00 |
| ಮಿಕ್ಸ್‌ವುಡ್ | | |
| 16. | ಮಿಲ್ವಾಚಿಲ್ಟಾ | 15.50 |
| 17. | ಬಸೋಲಾಬುಕ್ಕಿ | 11.50 |
| 18. | ಸಾಡಸ್ಟ್ | 7.50 |
| ಸ್ಟಾಪ್‌ವುಡ್ | | |
| 19. | ಬಿಳಿಚಕ್ಕೆ | 0.655 |
| 20. | ಬಾರ್ಕ್ & ವೇಸ್ಟ್ | 0.135 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ. ಆರ್. 338

## HOME SECRETARIAT

## ADENDUM

**No. HD 60 POSAEE 2009, Bangalore, dated : 28-1-2011**

1. In Government Order No. OE 60 POSAEE 2009, dated 24-8-2009 constituting Police Establishment Board, the following is added as sub-para 2(e), in the order portion, under "2Functions of the Board" after sub-para-2(d).

" The cases pertaining to transfer of Police Offiers/personnel on complaints shall be considered by the Police Establishment Board and action taken in this regard shall be reported to Government."

2. Further, in the said Government Order No. OE 60 POSAEE 2009 dated 24-8-2009 constituting Police Establishment board, the following is added after the last sentence in Para-4 of the order portion.

"As a general rule, police officers on operational duties in the field like Superintendent of Police incharge of Districts, including Additional Superintendent of Police, Inspector General of Police incharge of Range, shall have a minimum tenure of two years. The Chief Minister may, however, at his discretion, for reasons to be recorded in writing, transfer an officer of the above category within the period of two years."

By Order and in the name of Governor of Karnataka

**T.N. RAVIPRAKASH**

Under Secretary to Government

Home Department (Police Services)

P.R. 344

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು ಕಾಟೇನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 132 ಭೂಸ್ವಾಪ್ರ 2008, ದಿನಾಂಕ : 2–1–2009

**2.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಮುಸದ/ಲೆಶಾ/ಲೆಸ–1/3/ಭೂಸ್ವಾಧೀನ/10–11/1214, ದಿನಾಂಕ : 28–5–2010.

**ಪ್ರಸ್ತಾವನೆ :**

ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು ಕಾಟೇನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಶ್ರೀನಿವಾಸಪುರ ಗ್ರಾಮದ ಸ.ನಂ. 23ರ 39–11 ಎಕರೆ ಜಮೀನಿಗೆ ಮಧುಗಿರಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ : 5/84ರ ತೀರ್ಪಿನಂತೆ ಹೆಚ್ಚಿನ ಪರಿಹಾರ ರೂ. 59,14,332–00ಗಳನ್ನು ಪಾವತಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ : 2–1–09ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಿ ಈಗಾಗಲೇ ಈ ಮೊತ್ತವನ್ನು ಭೂಮಾಲೀಕರಿಗೆ ಪಾವತಿಸಲಾಗಿದೆ. ಈ ಪಾವತಿಯಲ್ಲಿ ಶೇ. 12ರಷ್ಟು ಹೆಚ್ಚುವರಿ ಮಾರುಕಟ್ಟೆ ದರ ಹಾಗೂ ಅದರ ಮೇಲೆ ಪಾವತಿಸಬೇಕಾದ ಬಡ್ಡಿ ಮೊತ್ತ ಸೇರಿರಲಿಲ್ಲ. ಈಗ ಈ ಬಾಬ್ತಿಗಾಗಿ ಲೆಕ್ಕಾಚಾರ ತಃಖ್ತೆಯನ್ನು ತಯಾರಿಸಿ ರೂ. 40,70,785–00ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ದಿನಾಂಕ : 28–5–10ರ ಪತ್ರದಲ್ಲಿ ಕೋರಿದ್ದಾರೆ. ಪರಿಷ್ಕೃತ ಲೆಕ್ಕಾಚಾರದಂತೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್ಎಸಿ ಸಂಖ್ಯೆ | ಶ್ರೀನಿವಾಸಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 5/84 | 23 | 39–11 | 29,94,225–00 |
| | | | ಒಟ್ಟು | 29,94,225–00 |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 74 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 28ನೇ ಜನವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು ಕಾಟೇನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಶ್ರೀನಿವಾಸಪುರ ಗ್ರಾಮದ ಸ.ನಂ. 23ರ 39–11 ಎಕರೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 5/84ರಲ್ಲಿ ನೀಡಿರುವ ಆದೇಶದಂತೆ ಶೇ. 12 ರಷ್ಟು ಹೆಚ್ಚುವರಿ ಮಾರುಕಟ್ಟೆ ದರವನ್ನು ಬಡ್ಡಿಯೊಂದಿಗೆ ಪಾವತಿಸಲು ರೂ. 29,94,225–00 ಗಳನ್ನು (ಇಪ್ಪತ್ತೊಂಭತ್ತು ಲಕ್ಷದ ತೊಂಭತ್ತಾಲ್ಕು ಸಾವಿರದ ಇನ್ನೂರ ಇಪ್ಪತ್ತೈದು ರೂ.ಗಳು ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.

3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ :20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ. ಆರ್. 345

## WATER RESOURCES SECRETARIAT

**Sub:** Regarding Implementation of Minor Irrigation Works under Accelerated Irrigation Benefit Programme (AIBP)-Formation of Technical Advisory Committee & Establishment of Monitoring Cell regarding.

**PREAMBLE :**

Government of India is according approval to the Minor Irrigation Scheme in Karnataka under Accelerated Irrigation Benefit Programme (AIBP) as per the Modified Guidelines of the Scheme. Following are some of the important eligibility criteria.

- Karnataka State is listed under the Non-special category States.
- Minor Irrigation schemes with potential more than 50 hectares which serve tribal areas and droughy prone areas can be included under AIBP.
- The schemes to be taken up will be decided in consultation with Planning Commission.
- Central Assistance will be in the form of central grant which will be 90% of the project cost in case of project benefiting drought prone area. The balance cost of the project will have to be borne by the State as State's share.
- Minor Irrigation Projects approved under this programme will have to be completed in two financial years.
- As per the clarification issued in the GOI letter number 10-23/2010-MI/502 dated 17-9-2010 Minor Irrigation projects with cost up to 2.00 lakhs per Hectare can be posed for AIBP. However sanction of central assistance will be restricted to 90% of the cost not exceeding Rs. 1.50 lakhs per Hectare.

Government of India in letter No. 10-2/2010-MI dated 3-1-2011 has desired to constitute the following :-

⏭ Establishment of Monitoring Cell in the State for Monitoring of MI Scheme under AIBP.

⏭ Constitution of Technical Advisory Committee (TAC), for the purpose of Techno Economic appraisal of the project.

Director (Monitoring), CWC Bangalore is to be included as one of the member in the above bodies.

Hence this Order.

**GOVERNMENT ORDER NO. MID 10 MASAVI 2011, BANGALORE, DATED : 27th January, 2011.**

In view of the above, Government are pleased to constitute the following bodies with the members mentioned there in with immediate effect and until further Orders.

Monitoring Cell (South)

| | | |
|---|---|---|
| 1) | Chief Engineer, Minor Irrigation South Zone, Bangalore | Head of the Cell |
| 2) | Director (Monitoring), Central Water Commission, Government of India, Bangalore | Member |
| 3) | Deputy Secretary to Government, Water Resources Department (Minor Irrigation) | Member |
| 4) | Superintending Engineer, Minor Irrigation Circle, Bangalore/Mysore/within their jurisdiction) | Member |
| 5) | Executive Engineer of the concerned Minor Irrigation Division | Member |
| 6) | Executive Engineer, Minor Irrigation Quality Control Division, Bangalore | Member |

Monitoring Cell (North)

| | | |
|---|---|---|
| 1) | Chief Engineer, Minor Irrigation North Zone, Bijapur | Head of the cell |
| 2) | Director (Monitoring), Central Water Commission, Government of India, Bangalore | Member |
| 3) | Deputy Secretary to Government, Water Resources Department (Minor Irrigation) | Member |

4) Superintending Engineer, Minor Irrigation Circle, Belgaum/Gulbarga within their jurisdiction) — Member
5) Executive Engineer, of the concerned Minor Irrigation Division — Member
6) Executive Engineer, Minor Irrigation Quality Control Division, Dharwad. — Member

Above Monitoring Cells have to ensure regular monitoring of all the Minor Irrigation Schemes under AIBP of the respective Zones.

Technical Advisory Committee (South Zone)

| | | |
|---|---|---|
| 1) | Chief Engineer, Minor Irrigation South Zone, Bangalore | Chairman |
| 2) | Director (Monitoring), Central Water Commission, Government of India, Bangalore | Member |
| 3) | Deputy Secretary to Government, Water Resources Department (Minor Irrigation) | Member |
| 4) | Superintending Engineer, Minor Irrigation Circle, Bangalore/Mysore/ within their jurisdiction) | Members |
| 5) | Executive Engineer, of the concerned Minor Irrigation Division | Member |
| 6) | Executive Engineer, Minor Irrigation Quality Control Division, Bangalore | Members |
| 7) | Executive Engineer (Designs), O/o Chief Engineer, Minor Irrigation South Zone, Banglaore | Member Secretary |

Technical Advisory Committee (North Zone)

| | | |
|---|---|---|
| 1) | Chief Engineer, Minor Irrigation North Zone, Bijapur | Chairman |
| 2) | Director (Monitoring), Central Water Commission, Government of India, Bangalore | Member |
| 3) | Deputy Secretary to Government, Water Resources Department (Minor Irrigation) | Member |
| 4) | Superintending Engineer, Minor Irrigation Circle, Belgaum/Gulbarga within their jurisdiction) | Members |
| 5) | Executive Engineer, of the concerned Minor Irrigation Division | Member |
| 6) | Executive Engineer, Minor Irrigation Quality Control Division, Dharwad | Members |
| 7) | Deputy Chief Engineer, O/o Chief Engineer, Minor Irrigation North Zone, Bijapur | Member Secretarty |

Duties and functions of the Committee will be as follows :

1) To function as Zonal Level Technical Advisory Committee.
2) To accord technical approval for the project.
3) To supervise and render technical Service/advice for implementation of the project.

By Order and in the name of Governor of Karnataka
**(RUDRAMURTHY)**
Ex Officio Under Secretary to Government
Water Resources Department (Minor Irrigation).

P.R. 346

## ಕಂದಾಯ ಸಚಿವಾಲಯ

**ವಿಷಯ :** ಕಾವೇರಿ ಯೋಜನೆ ನಿರ್ವಹಣೆ ಮಾಡುತ್ತಿರುವ ಮೆ: ಇಸಿಐಎಲ್, ಮೆ: ಸಿಎಂಎಸ್ ಕಂಪ್ಯೂಟರ್ಸ್ ಮತ್ತು ಮೆ : ಸಿ–ಡಾಕ್, ಪುಣೆ ಇವರ ಗುತ್ತಿಗೆ ಅವಧಿಯನ್ನು ಮುಂದುವರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 172 ಮುನೋಮು 2009, ದಿನಾಂಕ : 14–7–2010.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 192 ಮುನೋಮು 2009, ದಿನಾಂಕ : 13–7–2010
3. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ : Comp/09/2007-08, ದಿನಾಂಕ: 22–12–2010

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ : 14–7–2010ರ ಆದೇಶದಲ್ಲಿ ಮೆ: ಇಸಿಐಎಲ್ ಮತ್ತು ಮೆ: ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್ ರವರೊಂದಿಗೆ ಕಾವೇರಿ ಯೋಜನೆ ನಿರ್ವಹಣಾ ಗುತ್ತಿಗೆ ಅವಧಿಯನ್ನು ದಿನಾಂಕ : 30–6–2003 ರ ಗುತ್ತಿಗೆ ಕರಾರಿಗೊಳಪಟ್ಟು ದಿನಾಂಕ : 1–1–2010

ರಿಂದ 30–6–2010 ರವರೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಸಿ) ರನ್ವಯ ಮುಂದುವರೆಸಿ ಹಾಗೂ ಮುಂದುವರೆಸಲ್ಪಟ್ಟ ಗುತ್ತಿಗೆ ಅವಧಿಯಲ್ಲಿ ನಿರ್ವಹಣಾ ವೆಚ್ಚದ ದರಗಳಲ್ಲಿ ಯಾವುದೇ ರೀತಿಯ ಹೆಚ್ಚಳ ಇರುವುದಿಲ್ಲ ಎಂದು ಆದೇಶಿಸಿದೆ.

ಮೇಲೆ ಓದಲಾದ (2) ರ ದಿನಾಂಕ : 13–7–2010ರ ಆದೇಶದಲ್ಲಿ ಮೆ: ಸಿ–ಡಾಕ್, ಪುಣೆಯವರೊಂದಿಗೆ ಕಾವೇರಿ ತಂತ್ರಾಂಶ ನಿರ್ವಹಣಾ ಗುತ್ತಿಗೆ ಅವಧಿಯನ್ನು ದಿನಾಂಕ : 5–5–2005 ರ ಗುತ್ತಿಗೆ ಕರಾರಿಗೊಳಪಟ್ಟು ದಿನಾಂಕ : 1–1–2010 ರಿಂದ 30–6–2010 ರವರೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಸಿ) ರನ್ವಯ ಮುಂದುವರೆಸಿ ಹಾಗೂ ಮುಂದುವರೆಸಲ್ಪಟ್ಟ ಗುತ್ತಿಗೆ ಅವಧಿಯಲ್ಲಿ ನಿರ್ವಹಣಾ ವೆಚ್ಚವೆಂದು 4 ಇಂಜಿನೀಯರ್‌ಗಳಿಗೆ ತಿಂಗಳೊಂದಕ್ಕೆ ತಲಾ ರೂ. 90,000/– ಮತ್ತು ಅನ್ವಯಿಸುವ ತೆರಿಗೆ ಸೇರಿಸಿ ಪಾವತಿಸಲು ಅನುಮತಿ ನೀಡಿದೆ. ಗುತ್ತಿಗೆ ಮುಂದುವರಿಸಲ್ಪಡುವ ಅವಧಿಯಲ್ಲಿ ನಿರ್ವಹಣಾ ವೆಚ್ಚದ ದರಗಳಲ್ಲಿ ಯಾವುದೇ ರೀತಿಯ ಹೆಚ್ಚಳ ಇರುವುದಿಲ್ಲ ಎಂದು ಆದೇಶಿಸಿದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಕಾವೇರಿ ಗಣಕೀಕರಣ ಯೋಜನೆಯನ್ನು 2003–04 ನೇ ಸಾಲಿನಲ್ಲಿ ಜಾರಿಗೊಳಿಸಲಾಗಿದ್ದು, ಸದರಿ ಯೋಜನೆಯನ್ನು ರಾಜ್ಯಾದ್ಯಂತ ಅನುಷ್ಠಾನಗೊಳಿಸಲು M/s ECIL ಹಾಗೂ M/s CMS Computers Ltd. ರವರುಗಳನ್ನು ಟೆಂಡರ್ ಪ್ರಕ್ರಿಯೆ ಮೂಲಕ ಆಯ್ಕೆ ಮಾಡಿಗೊಳ್ಳಲಾಗಿರುತ್ತದೆ. ಮೆ: ಸಿ–ಡಾಕ್, ಪುಣೆರವರು ಕಾವೇರಿ ತಂತ್ರಾಂಶವನ್ನು ಅಭಿವೃದ್ಧಿಪಡಿಸಿದ್ದು ಅದರ ನಿರ್ವಹಣೆಯನ್ನು ಸಹ ಅವರೇ ಮಾಡಿಕೊಂಡು ಬರುತ್ತಿದ್ದಾರೆ. ಕಾವೇರಿ ಯೋಜನೆ ಅನುಷ್ಠಾನಕ್ಕಾಗಿ M/s ECIL ಹಾಗೂ M/s CMS Computers Ltd. ರವರೊಂದಿಗೆ ಹಾಗೂ ಕಾವೇರಿ ತಂತ್ರಾಂಶ ನಿರ್ವಹಣೆಗಾಗಿ ಮೆ: ಸಿ–ಡಾಕ್, ಪುಣೆ ರವರೊಂದಿಗೆ ಗುತ್ತಿಗೆ ಕರಾರು ಪತ್ರ ಮಾಡಿಕೊಳ್ಳಲಾಗಿದ್ದು, ಸದರಿ ಗುತ್ತಿಗೆ ಅವಧಿಯು 5 ವರ್ಷದ್ದಾಗಿರುತ್ತದೆ. ಸದರಿ ಗುತ್ತಿಗೆ ಕರಾರುಗಳನ್ವಯ M/s ECIL ಹಾಗೂ M/s CMS Computers Ltd. ಗುತ್ತಿಗೆ ಅವಧಿಯು ದಿನಾಂಕ : 19–11–2008 ಹಾಗೂ 5–12–2009 ಕ್ಕೆ ಕೊನೆಗೊಂಡಿರುತ್ತದೆ. ಮೆ: ಸಿ–ಡಾಕ್, ಪುಣೆ ಯವರ ಗುತ್ತಿಗೆ ಅವಧಿಯು ದಿನಾಂಕ : 31–1–2009 ಕ್ಕೆ ಮುಕ್ತಾಯಗೊಂಡಿರುತ್ತದೆ ಎಂದು ತಿಳಿಸಿರುತ್ತಾರೆ.

ಮುಂದುವರೆದು ವೆಬ್ ಆಧಾರಿತ ನೂತನ ಕಾವೇರಿ ತಂತ್ರಾಂಶ ಅಭಿವೃದ್ಧಿಪಡಿಸಿ ಅನುಷ್ಠಾನಗೊಳಿಸುವ ಯೋಜನೆಯ ಅಧ್ಯಯನ ವರದಿ ಹಾಗೂ ಆರ್‌ಎಫ್‌ಪಿ ವರದಿಗಳೆಲ್ಲವೂ ತಯಾರಿಸಲ್ಪಟ್ಟು ಸರ್ಕಾರದಿಂದ ಅನುಮೋದಿಸಲ್ಪಟ್ಟಿರುತ್ತದೆ. ಗುತ್ತಿಗೆದಾರರನ್ನು ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡು ನೂತನ ಗುತ್ತಿಗೆದಾರರು ಪತ್ರವನ್ನು ಪ್ರಕಟಪಡಿಸಲಾಗುವುದೆಂದು, ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡು ನೂತನ ಗುತ್ತಿಗೆದಾರರು ಆಯ್ಕೆಗೊಂಡ ನಂತರ ನೂತನ ವೆಬ್ ಆಧಾರಿತ ಕಾವೇರಿ ತಂತ್ರಾಂಶ ಅಭಿವೃದ್ಧಿಪಡಿಸಿ ಅನುಷ್ಠಾನಗೊಳಿಸಲು 9 ತಿಂಗಳು ಕಾಲಾವಕಾಶ ಬೇಕಾಗಿರುತ್ತದೆ. ಆದ್ದರಿಂದ ಸದರಿ ಗುತ್ತಿಗೆದಾರರ ಗುತ್ತಿಗೆ ಅವಧಿಯನ್ನು ದಿನಾಂಕ : 1–7–2010 ರಿಂದ 31–3–2011 ರವರೆಗೆ ವಿಸ್ತರಿಸುವುದು ಅವಶ್ಯವಿರುತ್ತದೆ. ಪ್ರಸ್ತುತ ಕಾವೇರಿ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ M/s ECIL ಹಾಗೂ M/s CMS Computers Ltd. ರವರ ಹಾಗೂ ಕಾವೇರಿ ತಂತ್ರಾಂಶ ನಿರ್ವಹಿಸುತ್ತಿರುವ M/s C-DAC, ಪುಣೆ ರವರ ಗುತ್ತಿಗೆ ಅವಧಿಯನ್ನು ಗುತ್ತಿಗೆ ಕರಾರು ಪತ್ರದ ಕರಾರುಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ದಿನಾಂಕ : 1–7–2010 ರಿಂದ 31–3–2011 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

"Agreed Tems and Conditions of Maintenance Service : In the meeting held on 22-12-2010 between the vendors M/s ECIL, M/s CMS Computers Ltd. and the Inspector General of Registration and Commissioner of Stamps, Bangalore it was unanimously agreed to impose fines at the following rates on the disruptions in service occurred due to breakdown of systems".

Service Disruptions details

A) Where there is only service disruption but not loss of data

| | | |
|---|---|---|
| i) | If the disruption in service does not exceed 6 hours | No fine |
| ii) | If the disruption in service exceed 6 hours but not exceeding more than 8 hours (1day) | 5% of the previous month's scanning charges of that Sub-registrar office. |
| iii) | If the disruption in service is more than 1 day-for each days disruptions | 10% of the previous month's scanning charges of that Sub-registrar office. |

B) Where there is disruption in service along with loss of data :

| | | |
|---|---|---|
| i) | Disruption along with loss of 1 days data | 10% of the previous month's scanning charges of that Sub-Registrar office. |
| ii) | Disruption along with loss of data for more than 1 day but less than 7 days-For each days disruption and data loss | 15% of the previous month's scanning charges of that Sub-registrar office. |
| iii) | Disruption along with loss of data for more than 7 days but less than 30 days – For each days disruptions and data loss | 20% of the previous month's scanning charges of that Sub-registrar office. |

Note : The recovery of lost data shall be made by the vendors at their own cost. In case of failure to do so, the cost will be recovered from the maintenance charges due to the vendors.

ಹಾಗೂ ವಿಸ್ತರಿಸಲ್ಪಡುವ ಗುತ್ತಿಗೆ ಅವಧಿಯಲ್ಲಿ ಈ ಕೆಳಕಂಡ ಕೋಷ್ಟಕದಲ್ಲಿ ಸೂಚಿಸಿದ ದರಗಳನ್ವಯ ಸೇವಾ ವೆಚ್ಚ ಪಾವತಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಗುತ್ತಿಗೆದಾರರ ಹೆಸರು | ಸೇವಾ ವೆಚ್ಚದ ದರಗಳು ರೂ.ಗಳಲ್ಲಿ | ವಿವರ |
|---|---|---|---|
| 1 | 2 | 3 | 4 |
| 1 | ಮೆ॥ ಇಸಿಐಎಲ್ ಬೆಂಗಳೂರು | ರೂ. 22.50 ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪ್ರತಿ ಪುಟಕ್ಕೆ | ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಳಗಾವಿ, ರಾಮನಗರ ಹಾಗೂ ತುಮಕೂರು ಜಿಲ್ಲೆಗಳನ್ನು ಹೊರತುಪಡಿಸಿ ಇತರೆ 25 ಜಿಲ್ಲೆಗಳು |
| 2 | ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್, ಬೆಂಗಳೂರು | ರೂ. 22.50 ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪ್ರತಿ ಪುಟಕ್ಕೆ | ಬೆಂಗಳೂರು ಗ್ರಾಮಾಂತರ, ಬೆಳಗಾವಿ, ರಾಮನಗರ ಹಾಗೂ ತುಮಕೂರು ಜಿಲ್ಲೆಗಳು |
| | | ರೂ. 15.50 ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪ್ರತಿ ಪುಟಕ್ಕೆ | ಬೆಂಗಳೂರು ನಗರ ಜಿಲ್ಲೆ |
| 3 | ಮೆ॥ ಸಿ–ಡಾಕ್, ಪುಣೆ | ಒಬ್ಬ ಇಂಜಿನಿಯರಿಗೆ ರೂ. 90,000/– ಮತ್ತು ಅನ್ವಯಿಸುವ ತೆರಿಗೆಗಳು | ನಾಲ್ಕು ಜನ ಇಂಜಿನಿಯರ್‌ಗಳು |

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯು ವೆಬ್ ಆಧಾರಿತ ನೂತನ ತಂತ್ರಾಂಶವನ್ನು ಅಭಿವೃದ್ಧಿಪಡಿಸಲು ಈಗಾಗಲೇ ಕ್ರಮ ಕೈಗೊಂಡಿರುವುದರಿಂದ ಹಾಗೂ ನೂತನ ತಂತ್ರಾಂಶವನ್ನು ಅಭಿವೃದ್ಧಿಪಡಿಸಿ ಅನುಷ್ಠಾನಗೊಳಿಸಲು ಸಾಕಷ್ಟು ಕಾಲಾವಕಾಶದ ಅವಶ್ಯಕತೆ ಇರುವುದರಿಂದ ಅಲ್ಲಿಯವರೆಗೆ ಪ್ರಸ್ತುತ ಕಾವೇರಿ ತಂತ್ರಾಂಶ ನಿರ್ವಹಣೆಗೆ ದೊರಕುತ್ತಿರುವ ಸೇವಾ ಗುಣಮಟ್ಟವನ್ನೇ ಮುಂದುವರಿಸುವುದು ಅವಶ್ಯವೆಂದು ಕಂಡುಬಂದಿರುವ ಹಿನ್ನೆಲೆಯಲ್ಲಿ ಮೆ॥ ಇಸಿಐಎಲ್, ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್ ಹಾಗೂ ಮೆ॥ ಸಿ–ಡಾಕ್, ಪುಣೆ ಇವರೊಂದಿಗೆ ಕಾವೇರಿ ಯೋಜನೆಯ ನಿರ್ವಹಣಾ ಗುತ್ತಿಗೆ ಅವಧಿಯನ್ನು ಮುಂದುವರಿಸಲು ತೀರ್ಮಾನಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 02 ಮುನೋಮು 2011, ಬೆಂಗಳೂರು, ದಿನಾಂಕ : 24–1–2011.**

ಮೆ॥ ಇಸಿಐಎಲ್, ಮೆ॥ ಸಿಎಂಎಸ್ ಕಂಪ್ಯೂಟರ್ ಲಿಮಿಟೆಡ್ ಹಾಗೂ ಮೆ॥ ಸಿ–ಡಾಕ್, ಪುಣೆ ಇವರೊಂದಿಗೆ ಕಾವೇರಿ ತಂತ್ರಾಂಶ ನಿರ್ವಹಣಾ ಗುತ್ತಿಗೆ ಅವಧಿಯನ್ನು ಕ್ರಮವಾಗಿ ದಿನಾಂಕ : 30–6–2003 ಹಾಗೂ 5–5–2005 ರ ಗುತ್ತಿಗೆ ಕರಾರಿಗೊಳಪಟ್ಟು ದಿನಾಂಕ : 1–7–2010 ರಿಂದ 31–3–2011 ರವರೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಕಲಂ 4 (ಸಿ) ರನ್ವಯ ಮುಂದುವರೆಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆದೇಶಿಸಿದೆ.

1. ಮೆ॥ ಇಸಿಐಎಲ್, ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್ ಹಾಗೂ ಮೆ॥ ಸಿ–ಡಾಕ್, ಪುಣೆ ಇವರೊಂದಿಗಿನ ಗುತ್ತಿಗೆ ಅವಧಿಯನ್ನು ದಿನಾಂಕ : 31–3–2011 ರ ನಂತರ ಯಾವುದೇ ಕಾರಣಕ್ಕೂ ಮುಂದುವರಿಸಲಾಗುವುದಿಲ್ಲ.
2. ಅಷ್ಟರಲ್ಲಿ ಟೆಂಡರ್ ಕರೆದು ಬೇರೆಯವರಿಗೆ ಗುತ್ತಿಗೆ ನೀಡಲು ಶೀಘ್ರ ಕ್ರಮ ತೆಗೆದುಕೊಳ್ಳುವುದು.

ಮುಂದುವರೆಸಲ್ಪಟ್ಟ ಗುತ್ತಿಗೆ ಅವಧಿ ಈ ಕೆಳಕಂಡಂತೆ ನಿರ್ವಹಣಾ ವೆಚ್ಚದ ದರ ಪಾವತಿಸಲು ಅನುಮತಿ ನೀಡಿದೆ.

| ಕ್ರ.ಸಂ. | ಗುತ್ತಿಗೆದಾರರ ಹೆಸರು | ಸೇವಾ ವೆಚ್ಚದ ದರಗಳು ರೂ.ಗಳಲ್ಲಿ | ವಿವರ |
|---|---|---|---|
| 1 | 2 | 3 | 4 |
| 1 | ಮೆ॥ ಇಸಿಐಎಲ್, ಬೆಂಗಳೂರು | ರೂ. 22.50 ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪ್ರತಿ ಪುಟಕ್ಕೆ | ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಳಗಾವಿ, ರಾಮನಗರ ಹಾಗೂ ತುಮಕೂರು ಜಿಲ್ಲೆಗಳನ್ನು ಹೊರತುಪಡಿಸಿ ಇತರೆ 25 ಜಿಲ್ಲೆಗಳು |
| 2 | ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್, ಬೆಂಗಳೂರು | ರೂ. 22.50 ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪ್ರತಿ ಪುಟಕ್ಕೆ | ಬೆಂಗಳೂರು ಗ್ರಾಮಾಂತರ, ಬೆಳಗಾವಿ, ರಾಮನಗರ ಹಾಗೂ ತುಮಕೂರು ಜಿಲ್ಲೆಗಳು |
| | | ರೂ. 15.50 ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪ್ರತಿ ಪುಟಕ್ಕೆ | ಬೆಂಗಳೂರು ನಗರ ಜಿಲ್ಲೆ |
| 3 | ಮೆ॥ ಸಿ–ಡಾಕ್, ಪುಣೆ | ಒಬ್ಬ ಇಂಜಿನಿಯರಿಗೆ ರೂ. 90,000/– ಮತ್ತು ಅನ್ವಯಿಸುವ ತೆರಿಗೆಗಳು | ನಾಲ್ಕು ಜನ ಇಂಜಿನಿಯರ್‌ಗಳು |

ಮೆ॥ ಇಸಿಐಎಲ್, ಮೆ॥ ಸಿಎಂಎಸ್ ಕಂಪ್ಯೂಟರ್ಸ್ ಲಿಮಿಟೆಡ್ ಹಾಗೂ ಮೆ॥ ಸಿ–ಡಾಕ್, ಪುಣೆ ಇವರು ಕಾವೇರಿ ಯೋಜನೆ ನಿರ್ವಹಣೆ ಮಾಡುತ್ತಿರುವ ದಿನಾಂಕ : 1–7–2010 ರಿಂದ 31–3–2011 ರ ಗುತ್ತಿಗೆ ಅವಧಿಯಲ್ಲಿ ನಿರ್ವಹಣೆಯಲ್ಲಿ ತೊಡಕು ಉಂಟಾದಲ್ಲಿ ಈ ಕೆಳಗಿನಂತೆ ಜುಲ್ಮಾನೆಯನ್ನು ವಿಧಿಸಲಾಗುವುದು.

Service Disruptions details :

A) Where there is only service disruption but not loss of data

| | | |
|---|---|---|
| i) | If the disruption in service does not exceed 6 hours | No fine |
| ii) | If the disruption in service exceed 6 hours but not exceeding more than 8 hours (1day) | 5% of the previous month's scanning charges of that Sub-registrar office. |
| iii) | If the disruption in service is more than 1 day-for each days disruptions | 10% of the previous month's scanning charges of that Sub-registrar office. |

B) Where there is disruption in service along with loss of data :

| | | |
|---|---|---|
| i) | Disruption along with loss of 1 days data | 10% of the previous month's scanning charges of that Sub-Registrar office. |
| ii) | Disruption along with loss of data for more than 1 day but less than 7 days-For each days disruption and data loss | 15% of the previous month's scanning charges of that Sub-registrar office. |
| iii) | Disruption along with loss of data for more than 7 days but less than 30 days – For each days disruptions and data loss | 20% of the previous month's scanning charges of that Sub-registrar office. |

Note : The recovery of lost data shall be made by the vendors at their own cost. In case of failure to do so, the cost will be recovered from the maintenance charges due to the vendors.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–2–04 Charges of Supply of Registrered Documents-051, General Expenses ಅಡಿಯಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 347 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಕಂದಾಯ ಸಚಿವಾಲಯ

**ವಿಷಯ :** 2006ನೇ ತಂಡದ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ : ಕಂಇ 51 ಎಎಸ್‌ಡಿ 2008, ದಿನಾಂಕ : 23–05–2008.
2. ಸರ್ಕಾರದ ಅಧಿಕೃತ ಜ್ಞಾಪನ ಸಂ : ಆರ್‌ಡಿ 223 ಎಸ್‌ಡಿ 2008, ದಿನಾಂಕ 11–06–2008.
3. ಸರ್ಕಾರದ ಪತ್ರ ಸಂ : ಕಂಇ 462 ಎಎಸ್‌ಡಿ 2010, ದಿನಾಂಕ : 09–08–2010.
4. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ, ದಕ್ಷಿಣ ಕನ್ನಡ, ಹಾವೇರಿ ತುಮಕೂರು, ಮೈಸೂರು, ದಾವಣಗೆರೆ, ಬೆಂಗಳೂರು ನಗರ ಮತ್ತು ಧಾರವಾಡ ಜಿಲ್ಲೆ ಇವರ ಪತ್ರಗಳು ದಿನಾಂಕ ಅನುಕ್ರಮವಾಗಿ 02–12–10, 11–10–10, 19–10–10, 02–09–10, 04–09–10, 30–08–10, 20–12–10 ಮತ್ತು 04–12–10.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿನಾಂಕ : 23–05–2008 ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997 ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳಿಗೆ ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ. ಸಂ. (2) ದಿನಾಂಕ : 11–06–2008 ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಆದರೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 5 ಪರಿವೀಕ್ಷಣಾ ತಹಶೀಲ್ದಾರರುಗಳು (ಶ್ರೀ ಶಂಭುಲಿಂಗಪ್ಪ, ಶ್ರೀ ಅಭ್ಯುದಯ ಎ. ಆನಂದ್, ಶ್ರೀ ಎಂ.ಜೆ. ಚೇತನ, ಶ್ರೀ ಪ್ರಸನ್ನಕುಮಾರ್ ಬಿ.ಕೆ. ಮತ್ತು ಶ್ರೀ ಇಸ್ಲಾವುದ್ದೀನ್) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಇನ್ನುಳಿದ 35 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ, ಜಿಲ್ಲಾ ತರಬೇತಿಯಲ್ಲಿದ್ದಾಗ, ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆಗಳ ಬಗ್ಗೆ ಮಾಹಿತಿಯನ್ನು ಮೇಲೆ ಓದಲಾದ ಕ್ರಸಂ. (3) ರ ದಿನಾಂಕ : 09–08–2010 ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರಯಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರ. ಸಂ. 4 ರ ದಿನಾಂಕ : 02–12–10, 11–10–10, 19–10–10, 02–09–10, 04–09–10, 30–08–10, 20–12–10 ಮತ್ತು 04–12–10 ರ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರನ್ವಯ ಈ ಕೆಳಕಂಡ 14 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 462 ಎಎಸ್‌ಡಿ 2010 ಬೆಂಗಳೂರು, ದಿನಾಂಕ: 21–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ 14 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 5 (1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪರಿವೀಕ್ಷಣಾ ತಹಶೀಲ್ದಾರರ ಹೆಸರು (ಶ್ರೀ/ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಹರೀಶ್ ಬಿ.ಆರ್. | 09–06–2008 | 08–06–2010 |
| 2 | ಶಿವಕುಮಾರ್ ಎಸ್.ಎಂ. | 29–05–2008 | 28–05–2010 |
| 3 | ದಯಾನಂದ ಬಿ.ಆರ್. | 30–05–2008 | 29–05–2010 |
| 4 | ಅಭಿಜಿನ್ ಬಿ. | 31–05–2008 | 30–05–2010 |
| 5 | ಕೊಟ್ರೇಶ್ ಹೆಚ್. | 06–06–2008 | 05–06–2010 |
| 6 | ಶಿವಕುಮಾರ್ ಸಿ.ಎಲ್. | 29–05–2008 | 28–05–2010 |
| 7 | ನವೀನ್ ಜೋಸೆಫ್ | 07–06–2008 | 06–06–2010 |
| 8 | ರೇಷ್ಮ ಹಾನಗಲ್ | 09–06–2008 | 08–06–2010 |
| 9 | ನಜ್ಮಾ ಜಿ. | 05–06–2008 | 04–06–2010 |
| 10 | ಮಮತಾ ಬಿ.ಕೆ. | 30–05–2008 | 29–05–2010 |
| 11 | ಗಾಯತ್ರಿ ನಾಯಕ್ | 06–06–2008 | 05–06–2010 |
| 12 | ವಿನಾಯಕ್ ಎ. ಪಾಲಂಕರ್ | 06–06–2008 | 05–06–2010 |
| 13 | ಬಸವರಾಜ ಎಂ. ಮೆಳವಂಕಿ | 06–06–2008 | 05–06–2010 |
| 14 | ಶಿವಕುಮಾರ್ ಕೆ.ಹೆಚ್. | 31–05–2008 | 30–05–2010 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 348

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಜ್ಯ ಸಮಗ್ರ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯ ಪ್ರಸ್ತಾವನೆಗಳಿಗೆ ಐಡೆಕ್ ಸಂಸ್ಥೆಯವರನ್ನು ಸಲಹೆಗಾರರನ್ನಾಗಿ ನೇಮಿಸಲು ಕೆ.ಟಿ.ಪಿ.ಪಿ. ಕಾಯ್ದೆ 4(ಜಿ) ರಂತೆ ವಿನಾಯ್ತಿ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಒಳಚರಂಡಿ ಮಂಡಳಿರವರ ಪತ್ರ ಸಂಖ್ಯೆ : ಕಜಮಂ ಸಿಇ/ಎಸ್‌ಜಿಇಇ–1/ಡಿಸಿಇ–1/ಎಇ–2/3644/2009–10, 19–03–10 ಮತ್ತು ಪತ್ರ ಸಂಖ್ಯೆ : ಕಜಮಂ/ತಾಂತ್ರಿಕ/INT.WS/Vol-II/1435/2010-11, ದಿನಾಂಕ : 12–08–2010.

**ಪ್ರಸ್ತಾವನೆ :**

ರಾಜ್ಯದ ಆಯ್ದ 16 ನಗರ/ಪಟ್ಟಣಗಳಿಗೆ 24X7 ರಂತೆ ನಿರಂತರ ಕುಡಿಯುವ ನೀರು ಒದಗಿಸುವ 'ಕನ್ನಡ ಗಂಗಾ' ಯೋಜನೆಯನ್ನು ಕಾರ್ಯಗತಗೊಳಿಸಲು ಅನುಸರಿಸಬೇಕಾದ ಸಮೀಕ್ಷೆ, ವಿನ್ಯಾಸ, ಅಂದಾಜು ವೆಚ್ಚ, ಇತ್ಯಾದಿ ಅಂಶಗಳನ್ನೊಳಗೊಂಡ ಸಮಗ್ರ ಯೋಜನಾ ವರದಿಯನ್ನು ತಯಾರಿಸಿ ಸರ್ಕಾರದಿಂದ ಪುರಸ್ಕೃತವಾದ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಿ ನಿಗದಿತ ಅವಧಿಯೊಳಗೆ ಪೂರ್ಣಗೊಳಿಸುವ ಸಲುವಾಗಿ ಐಡೆಕ್ ಸಂಸ್ಥೆಯೊಂದಿಗೆ ಯೋಜನೆಯ ಪ್ರಸ್ತಾವನೆಗಳನ್ನು ತಯಾರಿಸಬೇಕೆಂದು ನಿರ್ಣಯಿಸಲಾಗಿತ್ತು. ಇದಕ್ಕೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯನ್ನು ಯೋಜನಾ ಅಭಿವೃದ್ಧಿ ಏಜೆನ್ಸಿಯನ್ನಾಗಿ ಆಯ್ಕೆ ಮಾಡುವ ಜವಾಬ್ದಾರಿಯನ್ನು ವಹಿಸಲಾಗಿದೆ.

ರಾಜ್ಯದ ಸಮಗ್ರ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯ ಪ್ರಸ್ತಾವನೆಗಳನ್ನು ಐಡೆಕ್ ಸಂಸ್ಥೆಯನ್ನು ಸಲಹೆಗಾರರನ್ನಾಗಿ ನೇಮಿಸಲು ಕೆ.ಟಿ.ಪಿ.ಪಿ. ಕಾಯ್ದೆ ಕಲಂ 4(ಜಿ) ರಂತೆ ವಿನಾಯ್ತಿ ನೀಡಲು ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಮೇಲೆ ಓದಲಾದ ಕ್ರಮಸಂಖ್ಯೆ (1) ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 83 ಯುಎಂಎಸ್ 2010 ಬೆಂಗಳೂರು, ದಿನಾಂಕ: 14–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ರಾಜ್ಯದ ಸಮಗ್ರ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಯ ಪ್ರಸ್ತಾವನೆಗಳನ್ನು, ಟೆಂಡರ್ ಪ್ರಕ್ರಿಯೆ, ತಾಂತ್ರಿಕ ಸಲಹೆಗಾರರನ್ನಾಗಿ ನೇಮಿಸಲು ಮತ್ತು ಹಲವು ಯೋಜನಾಭಿವೃದ್ಧಿ ಚಟುವಟಿಕೆಗಳಲ್ಲಿ ಸಹಕರಿಸಲು ಸಮಾಲೋಚಕ ಸಂಸ್ಥೆಯನ್ನಾಗಿ Infrastructure Development Corporation (Karnataka) Limited ಐಡೆಕ್ ಸಂಸ್ಥೆಯನ್ನು ರೂ. 25.00 ಲಕ್ಷಗಳ ವೆಚ್ಚದಲ್ಲಿ, ಒಂದು ವರ್ಷದ ಕಾಲಾವಧಿ ಅಥವಾ ಒಪ್ಪಂದದ ಅನುಸಾರವಾಗಿ ವರದಿಗಳನ್ನು ನೀಡುವ ತನಕ

ಯಾವುದು ಮೊದಲೋ ಅಲ್ಲಿಯವರೆವಿಗೆ ನೇರವಾಗಿ ನೇಮಿಸಿಕೊಳ್ಳಲು ಸರ್ಕಾರವು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 199ರ ಕಲಂ 4 (ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಐಡೆಕ್ ಸಂಸ್ಥೆಯಿಂದ ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ದೃಢಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 908 ವೆಚ್ಚ–12/2010, ದಿನಾಂಕ : 01–12–2010 ಮತ್ತು ದಿನಾಂಕ 30–12–2010 ರಲ್ಲಿ ನೀಡಿದ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಪಿ.ಆರ್. 349

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುವಾಗುವಂತೆ ರೂ. 10.00 ಲಕ್ಷಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಆದೇಶ ಸಂಖ್ಯೆ : ನಅಇ 355 ಬೆಮಪ್ರಾ 2008 (ಪಿ) ದಿನಾಂಕ : 22–10–2009.
2. ಸರ್ಕಾರದ ಆದೇಶ ಸಂಖ್ಯೆ : ನಅಇ 355 ಬೆಮಪ್ರಾ 2008 (ಪಿ), ದಿನಾಂಕ : 29–03–2010.
3. ಆಯುಕ್ತರು, ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ತೋರಣಗಲ್ಲು, ಸಂಡೂರು ರವರ ಪತ್ರ ಸಂಖ್ಯೆ : ಸಂ/ವಾಡಾ/ಆಡಳಿತ/32/2009–10, ದಿನಾಂಕ : 06–07–2010.
4. ಸರ್ಕಾರಿ ಆದೇಶ ಸಂಖ್ಯೆ : ನಅಇ 04 ಪಿಎನ್‌ಜಿ 2010, ದಿನಾಂಕ : 07–04–2010.

**ಪ್ರಸ್ತಾವನೆ :**

ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ, ನಗರಾಭಿವೃದ್ಧಿ ಇಲಾಖೆಯ ರಾಜ್ಯ ವಲಯದ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಸಂಬಂಧಿಸಿದಂತೆ 2009–10ನೇ ಸಾಲಿಗೆ ಮುಂದುವರೆದ ಯೋಜನಾ ಕಾರ್ಯಕ್ರಮಗಳಡಿಯಲ್ಲಿ ಆಯವ್ಯಯದಲ್ಲಿ ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಲೆಕ್ಕ ಶೀರ್ಷಿಕೆ 2217–80–800–0–23–059 ರಡಿಯಲ್ಲಿ ಅನುವು ಮಾಡಿರುವ ಮೊತ್ತದಲ್ಲಿ ಉಳಿತಾಯ ಆಗುವ ಹಣದಲ್ಲಿ ರೂ. 1.00 ಕೋಟಿಗಳನ್ನು (ರೂ. ಒಂದು ಕೋಟಿ ಮಾತ್ರ) ಸದರಿ ಲೆಕ್ಕಶೀರ್ಷಿಕೆಯಿಂದ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಪ್ರಾಥಮಿಕವಾಗಿ ಅನುವು ಮಾಡಿರುವ ಹೊಸ ಲೆಕ್ಕಶೀರ್ಷಿಕೆ 2217–80–800–0–25ಕ್ಕೆ ಮರು ಹೊಂದಾಣಿಕೆ ಮಾಡಿ ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಬಿಡುಗಡೆ ಮಾಡಲು ಆದೇಶಿಸಲಾಗಿತ್ತು. ಆದರೆ ಸದರಿ ಮೊತ್ತವನ್ನು ಡ್ರಾ ಮಾಡಲು ಪ್ರಾಧಿಕಾರವು ಖಜಾನೆಗೆ ಬಿಲ್ಲುಗಳನ್ನು ಸಲ್ಲಿಸಲಾಗಿ ಸದರಿ ಲೆಕ್ಕ ಶೀರ್ಷಿಕೆಯಡಿ ಸಾಕಷ್ಟು ಮೊತ್ತವು ಉಳಿದಿಲ್ಲದಿರುವ ಕಾರಣ ಮತ್ತು ಪ್ರಸ್ತುತ ರೂ. 23.98 ಲಕ್ಷಗಳು ಮಾತ್ರ ಲಭ್ಯವಿರುವುದಾಗಿ ತಿಳಿಸಿದ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ 2ರ ಆದೇಶದಲ್ಲಿ ಸದರಿ ಮೊತ್ತವನ್ನು ಬಿಡುಗಡೆ ಮಾಡಿ ಆದೇಶಿಸಲಾಗಿತ್ತು. ಆದರೆ ಆರ್ಥಿಕ ವರ್ಷದ ಕೊನೆಯ ದಿನವಾದ್ದರಿಂದ ಹಣ ಡ್ರಾ ಮಾಡಲು ಸಾಧ್ಯವಾಗಲಿಲ್ಲ.

ಆಯುಕ್ತರು, ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ತೋರಣಗಲ್ಲು, ಸಂಡೂರುರವರು ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಈ ಹಿಂದೆ ಕೋರಲಾದ ಯಾವುದೇ ಮೊತ್ತವು ಬಿಡುಗಡೆಯಾಗದಿರುವ ಕಾರಣ ಪ್ರಸ್ತುತ ಹಣಕಾಸು ವರ್ಷದಲ್ಲಿ ರೂ. 100.00 ಲಕ್ಷಗಳ ಅನುದಾನವನ್ನು ಕಛೇರಿಯ ಕಾರ್ಯಚಟುವಟಿಕೆಗಳಿಗಾಗಿ ಹಾಗೂ ಅಧಿಕಾರಿಯ ಸಿಬ್ಬಂದಿಯವರ ವೇತನಕ್ಕಾಗಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ನಗರಾಭಿವೃದ್ಧಿ ಇಲಾಖೆಯ ಹಾಗೂ ರಾಜ್ಯ ವಲಯದ ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಸಂಬಂಧಿಸಿದಂತೆ 2010–11 ನೇ ಸಾಲಿಗೆ ಮುಂದುವರೆದ ಯೋಜನಾ ಕಾರ್ಯಕ್ರಮಗಳ ಅಡಿಯಲ್ಲಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ ಇವರಿಗೆ ಇತರೆ ಖರ್ಚುಗಳ ಬಾಬ್ತಾಗಿ ರೂ. 10.00 ಲಕ್ಷಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 2217–80–800–0–25ರಡಿಯಲ್ಲಿ ಮಂಜೂರು ಮಾಡಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಪ್ರಾಧಿಕಾರದ ಸಿಬ್ಬಂದಿ/ಅಧಿಕಾರಿಗಳ ವೇತನ ಮತ್ತು ಕಾರ್ಯಚಟುವಟಿಕೆಗಳಿಗಾಗಿ ತುರ್ತಾಗಿ ಅಗತ್ಯವಿರುವ ರೂ. 10.00 ಲಕ್ಷಗಳ ಮೊತ್ತವನ್ನು 2217–80–800–0–25 ಲೆಕ್ಕ ಶೀರ್ಷಿಕೆಯಡಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 355 ಬೆಮಪ್ರಾ 2008 (ಪಿ), ಬೆಂಗಳೂರು, ದಿನಾಂಕ: 22–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನಗರಾಭಿವೃದ್ಧಿ ಇಲಾಖೆಯ ಹಾಗೂ ರಾಜ್ಯ ವಲಯದ ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಸಂಬಂಧಿಸಿದಂತೆ 2010–11ನೇ ಸಾಲಿನ ಆಯವ್ಯಯದಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳ ಅಡಿಯಲ್ಲಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ ಇವರಿಗೆ ಇತರೆ ಖರ್ಚುಗಳ ಬಾಬ್ತಾಗಿ ರೂ. 10.00 ಲಕ್ಷಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 2217–80–800–0–25 ರಡಿಯಲ್ಲಿ ಮಂಜೂರು ಮಾಡಲಾದ ಮೊತ್ತವನ್ನು ಆಯುಕ್ತರು ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

1. ಈ ಯೋಜನೆಯ ಲೆಕ್ಕ ಶೀರ್ಷಿಕೆಯಡಿ ಬಿಡುಗಡೆ ಮಾಡಲಾದ ಮೊತ್ತವನ್ನು ಬಿಡುಗಡೆ ಮಾಡಿದ ಉದ್ದೇಶಕ್ಕೆ ಮಾತ್ರ ವೆಚ್ಚ ಮಾಡತಕ್ಕದ್ದು ಹಾಗೂ ಯಾವುದೇ ಕಾರಣಕ್ಕೂ ಸದರಿ ಮೊತ್ತವನ್ನು ಬೇರೆ ಯೋಜನೆಗಳಿಗೆ ಬಳಸಬಾರದು.
2. ಈ ಆದೇಶದಲ್ಲಿ ಬಿಡುಗಡೆ ಮಾಡಿದ ಮೊತ್ತವನ್ನು ಮೇಲೆ ತಿಳಿಸಿರುವ ಲೆಕ್ಕ ಶೀರ್ಷಿಕೆಯಲ್ಲಿ ಡ್ರಾ ಮಾಡಲು ಆಯುಕ್ತರು, ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ, ವಿಜಯನಗರ ಇವರು ಪೇಯೀಸ್ ರಸೀದಿಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ ಇವರ ಮೇಲು ರುಜುವನ್ನು ಪಡೆದು ಡ್ರಾ ಮಾಡತಕ್ಕದ್ದು.

3. ಈ ಪ್ರದೇಶದಲ್ಲಿ ಡ್ರಾ ಮಾಡಿದ ಮೊತ್ತವನ್ನು ವಿಜಯನಗರ ಪ್ರಾಧಿಕಾರದ ಕಾರ್ಯಚಟುವಟಿಕೆಗಳಿಗೆ ಉಪಯೋಗಿಸತಕ್ಕದ್ದು ಮತ್ತು ಲೆಕ್ಕ ಪತ್ರಗಳನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಹಣಕ್ಕೆ ಬಳಕೆ ಪ್ರಮಾಣ ಪತ್ರ (Utilization Certificate) ವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮೇಲೆ ಕ್ರಮಾಂಕ (4)ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಬಳಸಿಕೊಳ್ಳತಕ್ಕದ್ದು ಮತ್ತು ಸದರಿ ಆದೇಶದಲ್ಲಿ ಸೂಚಿಸಿರುವಂತೆ ಕ್ರಮ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 806 Exp-9/2010, ದಿನಾಂಕ : 5–1–2011 ರನ್ವಯ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 350

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಚಿತ್ರದುರ್ಗದ ಚಳ್ಳಕೆರೆಯ ಭಾರತೀಯ ವಿಜ್ಞಾನ ಕ್ಯಾಂಪಸ್‌ನಲ್ಲಿ ಪ್ರೌಢಶಾಲೆಯ ವಿಜ್ಞಾನ ಉಪಾಧ್ಯಾಯರುಗಳಿಗೆ ತರಬೇತಿ ನೀಡಲು ಹಾಗೂ "Intensive Talent Development Centre" ಸ್ಥಾಪಿಸಿ ಇದಕ್ಕೆ ಮೂಲಸೌಕರ್ಯ ಒದಗಿಸುವ ಯೋಜನೆಯ ಅನುಷ್ಠಾನಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಛೇರ್‌ಮನ್, ಚಳ್ಳಕೆರೆ ಕ್ಯಾಂಪಸ್ ಕಮಿಟಿ, ಭಾರತೀಯ ವಿಜ್ಞಾನ ಸಂಸ್ಥೆ, ಚಳ್ಳಕೆರೆ ಇವರ ಪತ್ರ ದಿನಾಂಕ : 27–09–2010.
2. ಸರ್ಕಾರಿ ಆದೇಶ ಸಂಖ್ಯೆ : ಎಫ್ ಡಿ 237 ಬಿಆರ್ ಎಸ್ 2010, ದಿನಾಂಕ : 20–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಪತ್ರದಲ್ಲಿ ಛೇರ್‌ಮನ್, ಚಳ್ಳಕೆರೆ ಕ್ಯಾಂಪಸ್ ಕಮಿಟಿ, ಭಾರತೀಯ ವಿಜ್ಞಾನ ಸಂಸ್ಥೆ, ಚಳ್ಳಕೆರೆ. ಇವರು ಚಿತ್ರದುರ್ಗದ ಚಳ್ಳಕೆರೆಯಲ್ಲಿ ಪ್ರೌಢಶಾಲೆಯ ವಿಜ್ಞಾನ ಉಪಾಧ್ಯಾಯರುಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಹಾಗೂ "Intensive Talent Development Centre" ಸ್ಥಾಪಿಸಿ ಮೂಲಸೌಕರ್ಯಗಳನ್ನು ಒದಗಿಸಲು ರೂ. 2.00 ಕೋಟಿಗಳ ಸಹಾಯಾನುದಾನವನ್ನು ಒದಗಿಸುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಆರ್ಥಿಕ ಇಲಾಖೆಯ ಟಿಪ್ಪಣಿಯಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ ಚಿತ್ರದುರ್ಗದ ಚಳ್ಳಕೆರೆ ಕ್ಯಾಂಪಸ್‌ನಲ್ಲಿ ಪ್ರೌಢಶಾಲೆಯ ವಿಜ್ಞಾನ ಉಪಾಧ್ಯಾಯರುಗಳಿಗೆ ತರಬೇತಿ ನೀಡಲು ಹಾಗೂ "Intensive Talent Development Centre" ಅನ್ನು ಸ್ಥಾಪಿಸಿ ಇದಕ್ಕೆ ಮೂಲಸೌಕರ್ಯಗಳನ್ನು ಒದಗಿಸಲು ಅನುವಾಗುವಂತೆ 2010–11ನೇ ಸಾಲಿನ ಪೂರಕ ಅಂದಾಜುಗಳ 3ನೇ ಕಂತಿನಲ್ಲಿ ಲೆಕ್ಕಶೀರ್ಷಿಕೆ 3425–60–600–0–02 ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ – 059 ಇತರೆ ಖರ್ಚು (ಯೋಜನೆ) ಇದರಡಿ ಹೆಚ್ಚುವರಿಯಾಗಿ ರೂ. 200.00 ಲಕ್ಷಗಳನ್ನು ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿರುವುದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಿಯಇ 166 ವಿತ್ರಮ 2010 ಬೆಂಗಳೂರು, ದಿನಾಂಕ: 27–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ ಚಿತ್ರದುರ್ಗದ ಚಳ್ಳಕೆರೆ ಕ್ಯಾಂಪಸ್ ನಲ್ಲಿ ಪ್ರೌಢಶಾಲೆಯ ವಿಜ್ಞಾನ ಉಪಾಧ್ಯಾಯರುಗಳಿಗೆ ತರಬೇತಿ ನೀಡಲು ಹಾಗೂ "Intensive Talent Development Centre" ಅನ್ನು ಸ್ಥಾಪಿಸಿ ಇದಕ್ಕೆ ಮೂಲಸೌಕರ್ಯಗಳನ್ನು ಒದಗಿಸುವ ಉದ್ದೇಶಕ್ಕಾಗಿ **ಲೆಕ್ಕಶೀರ್ಷಿಕೆ 3425–60–600–0–02 ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ – 059 ಇತರೆ ಖರ್ಚು (ಯೋಜನೆ)** ಇದರಡಿ ಹೆಚ್ಚುವರಿಯಾಗಿ ಒದಗಿಸಿರುವ ರೂ. 200.00 ಲಕ್ಷಗಳನ್ನು (ಇನ್ನೂರು ಲಕ್ಷ ರೂ.ಗಳು ಮಾತ್ರ) ಛೇರ್‌ಮನ್, ಚಳ್ಳಕೆರೆ ಕ್ಯಾಂಪಸ್ ಕಮಿಟಿ, ಭಾರತೀಯ ವಿಜ್ಞಾನ ಸಂಸ್ಥೆ, ಚಳ್ಳಕೆರೆ. ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಿ ಸಹಾಯಾನುದಾನ ಬಿಡುಗಡೆ ಮಾಡಲಾಗಿದೆ.

1. ಈ ಅನುದಾನವನ್ನು ಆರ್ಥಿಕ ಇಲಾಖೆಯು ಒದಗಿಸಿರುವ ಪೂರಕ ಅಂದಾಜುಗಳ 3ನೇ ಕಂತಿನಲ್ಲಿ ಲೆಕ್ಕಶೀರ್ಷಿಕೆ 3425–60–600–0–02 (059) (ಯೋಜನೆ) ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದಡಿ ಹೆಚ್ಚುವರಿಯಲ್ಲಿ ಭರಿಸತಕ್ಕದ್ದು.
2. ಛೇರ್‌ಮೆನ್, ಚಳ್ಳಕೆರೆ ಕ್ಯಾಂಪಸ್ ಕಮಿಟಿ, ಭಾರತೀಯ ವಿಜ್ಞಾನ ಸಂಸ್ಥೆ, ಚಳ್ಳಕೆರೆ ಇವರು ಸ್ವೀಕೃತಿ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳ ಮೇಲುರುಜುವಿನೊಂದಿಗೆ ಹಣ ಸೆಳೆಯಬಹುದು.
3. ಈ ಅನುದಾನವನ್ನು ಉದ್ದೇಶಿತ ಕಾರ್ಯಕ್ರಮಗಳಿಗೆ ಹೊರತುಪಡಿಸಿ ಬೇರೆ ಯಾವುದೇ ಕಾರ್ಯಕ್ರಮಗಳಿಗೆ ಉಪಯೋಗಿಸತಕ್ಕದಲ್ಲ.
4. ಉದ್ದೇಶಿತ ಈ ಕಾರ್ಯಕ್ರಮಕ್ಕೆ ಉಪಯೋಗಿಸಿಕೊಂಡು ಖರ್ಚಾಗದೇ ಉಳಿದ ಹಣವನ್ನು ಸರ್ಕಾರಕ್ಕೆ ಮರುಪಾವತಿಸತಕ್ಕದ್ದು.
5. ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಅರ್ಥಪೂರ್ಣವಾಗಿ ಸದುಪಯೋಗಪಡಿಸಿಕೊಂಡು ದೃಢೀಕೃತ ಉಪಯೋಗತಾ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 11 ವೆಚ್ಚ–2/11, ದಿನಾಂಕ : 20–01–2011ರನ್ವಯ ಹಾಗೂ ಆದೇಶ ಸಂಖ್ಯೆ : ಎಫ್ ಡಿ 237 ಬಿಆರ್ ಎಸ್ 2010, ದಿನಾಂಕ : 20–01–2011ರಲ್ಲಿ ನೀಡಿದ ಆದೇಶದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 351

## FINANCE SECRETARIAT

**Sub :** Sanction of additional grant during 2010-11 under the Head of Account 3425-60-600-0-02-059 (Plan)

**Read :** File No.: ವಿಯಇ 166 ವಿತ್ರಮ 2010 from IT, BT & S&T Department.

**Preamble:**

In the File read above, the Science & Technology Department has requested to sanction additional grants of Rs. 200.00 lakhs (Rupees Two Hundred Lakhs only) under the Head of Account 3425-60-600-0-02-059 (Plan) to meet the expenditure towards "Intensive talent Development Centre" at Challakere Campus of Indian Institute of Science.

The proposal has been examined and hence the following order.

**Government Order No. FD 237 BRS 2010, Bangalore, Dated 20-01- 2011**

Sanction is accorded for the additional grant of Rs. 200.00 lakhs (Rupees Two Hundred Lakhs only) under the Head of Account 3425-60-600-0-02-059 (Plan) to meet the expenditure towards "Intensive Talent Development Centre" at Challakere Campus of Indian Institute of Science.

The additional grant sanctioned in this Order may be regularized by reappropriation of overall savings under grant No. 15 through Supplementary Estimates before the close of the financial year.

By Order and in the name of the Governor of Karnataka,

**C. SHAMA RAO**

Deputy Secretary to Government (FR & BCC)

Finance Department

**ANNEXURE – I**

Statement of approved additionalities forwarded to Deputy Director TNMC Bangalore.

Rs. In lakhs

| Sl. No.. | Section | G.O. No. & Date | and | Head of Account | Original Provision | | Additionality approved | | Total provision including additionality | |
|---|---|---|---|---|---|---|---|---|---|---|
| 1 | Exp.-II | FD 237 BRS 2011 Dt. 20-1-2011 | 15 | 3425-60-600-0-02-059 V | Plan | Non-Plan | Plan | Non-Plan | Plan | Non-Plan |
| | | | | | 1000.00 | --- | 200.00 | --- | 1200 | --- |

**C. SHAMA RAO**

Deputy Secretary to Government (FR & BCC)

Finance Department

PR. 351

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಭವ್ಯ ಎಸ್.ಒ., ವೈದ್ಯಾಧಿಕಾರಿ, ಸ.ಆ.ಕೇಂದ್ರ, ಪಂಚನಹಳ್ಳಿ, ಚಿಕ್ಕಮಗಳೂರು ಜಿಲ್ಲೆ ಇವರು ಅನಧಿಕೃತ ಗೈರುಹಾಜರಾಗಿದ್ದು, ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ ಜೆಆರ್‌ಓ (ಎಂ)50/2010–11 ದಿನಾಂಕ : 21–1–2010 ಮತ್ತು 06–12–2010.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ॥ ಭವ್ಯ ಎಸ್.ಒ., ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ ಪಂಚನಹಳ್ಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ದಿನಾಂಕ : 05–02–2009 ರಂದು ಸರ್ಕಾರಿ ಸೇವೆಗೆ ಸೇರಿದ್ದು, ದಿನಾಂಕ : 16–06–2009 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಅನಧಿಕೃತ ಗೈರುಹಾಜರಾಗಿರುವುದರಿಂದ ಪ್ರೊಬೆಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 415 ಹೆಚ್‌ಎಸ್‌ಹೆಚ್ 2009 ಬೆಂಗಳೂರು, ದಿನಾಂಕ: 14–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಭವ್ಯ ಎಸ್.ಒ., ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ ಪಂಚನಹಳ್ಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ದಿನಾಂಕ : 16–6–2009 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರಿಗೆ ಇಲಾಖೆಯ ವೈದ್ಯಾಧಿಕಾರಿ ಹುದ್ದೆಯಲ್ಲಿ ಮುಂದುವರೆಯಲು ಇಚ್ಛೆ ಇಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977 ರ ನಿಯಮ 6 ರಡಿಯಲ್ಲಿ ಸದರಿಯವರನ್ನು ದಿನಾಂಕ : 16–06–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು–1)

ಪಿ.ಆರ್. 352

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಶಶಿಕಲಾ, ಮಹಿಳಾ ಪಿಎಸ್‌ಐ (ಸಿವಿಲ್) ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 133/ಸಿಬ್ಬಂದಿ-1/2009-10 ದಿನಾಂಕ : 16-11-2010.

**ಪ್ರಸ್ತಾವನೆ :**

ಶ್ರೀಮತಿ ಶಶಿಕಲಾ, ಮ.ಪಿ.ಎಸ್.ಐ. ರವರು ದಿನಾಂಕ 01-09-2005 ರಂದು ನೇಮಕಾತಿ ಹೊಂದಿದ್ದು, ಇವರ 2½ ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ 01-03-2008 ಕ್ಕೆ ಪೂರ್ಣಗೊಳ್ಳುತ್ತದೆ. ಆದರೆ ಇವರು ಮೂಲ ತರಬೇತಿಯ ಪೂರಕ ಪರೀಕ್ಷೆಯಲ್ಲಿ ದಿನಾಂಕ 13-07-2009 ರಂದು ಉತ್ತೀರ್ಣರಾಗಿರುವುದರಿಂದ, ನೇಮಕಾತಿ ಪ್ರಾಧಿಕಾರಕ್ಕೆ ಒಳಪಟ್ಟಂತೆ ಕೆ.ಸಿ.ಎಸ್. (ಪರಿವೀಕ್ಷಣೆ) ನಿಮಯಗಳು, 1977 ರ ನಿಮಯ 4(1)(ii) ರನ್ವಯ ಇವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 01-03-2008 ರಿಂದ 01-06-2009 ರವರೆಗೆ 1 ವರ್ಷ 3 ತಿಂಗಳು ವಿಸ್ತರಿಸಲಾಗಿರುತ್ತದೆ. ಸದರಿಯವರು ದಿನಾಂಕ : 13-07-2009 ರಂದು ಅನುಪೂರಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದು ಇವರ ವಿರುದ್ಧ ಚಾಲ್ತಿ ಶಿಕ್ಷೆ/ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಇಲ್ಲದಿರುವುದರಿಂದ ಹಾಗೂ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977 ರ ನಿಯಮ 4 ಮತ್ತು 5 (1) ರನ್ವಯ ಇವರು ಹೊಂದಿರುವ ಹುದ್ದೆಯ ಕಾರ್ಯಭಾರನ್ನು ನಿರ್ವಹಿಸಲು ಸಮರ್ಥರಿರುವುದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 02-06-2009 ರಿಂದ 13-07-2009 ರ ವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 24 ಪೊಸಇ 2011, ಬೆಂಗಳೂರು, ದಿನಾಂಕ: 28-01-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977 ರ ನಿಯಮ 4(1) (i) ರನ್ವಯ ಶ್ರೀಮತಿ ಶಶಿಕಲಾ, ಮ.ಪಿ.ಎಸ್.ಐ. (ಸಿವಿಲ್) ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ : 02-06-2009 ರಿಂದ 13-07-2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977 ರ ನಿಯಮ 10 ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 353

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ :** 2010-11 ನೇ ಸಾಲಿಗೆ ರಾಜ್ಯ ವಲಯ ಯೋಜನೆ ಮುಂದುವರಿಕೆ ಕಾರ್ಯಕ್ರಮದಡಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಶಿರಸಿ ಶೈಕ್ಷಣಿಕ ಜಿಲ್ಲೆರವರ ಕಛೇರಿ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಇಡಿ : 133 : ಯೋಸಕ 2010, ದಿನಾಂಕ : 13-08-2010.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರುರವರ ಪತ್ರ ಸಂಖ್ಯೆ : ಯೋ : 7 : ಉ.ನಿ.ಕ್ಷೇ.ಶಿ.ಕ ನಿರ್ಮಾಣ ದುರಸ್ತಿ ಅನು 2/2010-11 ದಿನಾಂಕ : 19-01-2011.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿರಸಿ ಶೈಕ್ಷಣಿಕ ಜಿಲ್ಲೆ ಕಛೇರಿಯ ಕಟ್ಟಡ ನಿರ್ಮಾಣಕ್ಕಾಗಿ 35.0 ಲಕ್ಷ ರೂಗಳನ್ನು ಒದಗಿಸಲಾಗಿದೆ.
2. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ರವರು, ಸದರಿ ಕಛೇರಿ ಕಟ್ಟಡ ನಿರ್ಮಾಣಕ್ಕೆ 70.00 ಲಕ್ಷ ರೂಗಳಿಗೆ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರ್ ಇಲಾಖೆರವರಿಂದ ಪಡೆದು ಆಡಳಿತಾತ್ಮಕ ಅನುಮೋದನೆ ನಿಡುವಂತೆ ಸರ್ಕಾರನ್ನು ಕೋರಿರುತ್ತಾರೆ.
3. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 27 ಯೋಸಕ 2011 ಬೆಂಗಳೂರು, ದಿನಾಂಕ: 28-01-2011 [ಇಡಿ 05 ಸ್ಪೀಮರ (ಯುನಿಕ್) 2011, ದಿನಾಂಕ : 28-01-2011]**

ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿರಸಿ ಶೈಕ್ಷಣಿಕ ಜಿಲ್ಲೆ ಕಛೇರಿಯ ಕಟ್ಟಡ ನಿರ್ಮಾಣದ 70.00 ಲಕ್ಷ ರೂಗಳ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನಿಡಿದೆ.

ಷರತ್ತುಗಳು :-

- 2010-11 ನೇ ಸಾಲಿಗೆ ಈ ಉದ್ದೇಶಕ್ಕಾಗಿ ಬಿಡುಗಡೆ ಮಾಡಿರುವ 35.00 ಲಕ್ಷ ರೂಗಳನ್ನು ಬಳಸಿಕೊಂಡು ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸತಕ್ಕದ್ದು.
- ಕಾಮಗಾರಿಯನ್ನು ಪ್ರಚಲಿತವಿರುವ ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳತಕ್ಕದ್ದು.
- ಎಲ್ಲಾ ಖರೀದಿಗಳಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಕರ್ನಾಟಕ ಪಾರದರ್ಶಕ ಕಾಯ್ದೆಯ ಎಲ್ಲಾ ನಿಯಮಗಳನ್ನೂ ಚಾಚೂ ತಪ್ಪದೇ ಪಾಲಿಸತಕ್ಕದ್ದು.
- ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 354

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಶಿಕ್ಷಣ ಸಚಿವಾಲಯ

**ವಿಷಯ :** ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಬೋಧಕ ಮತ್ತು ಬೋಧಕೇತರ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 82 ಯುಆರ್‌ಸಿ 2009, ದಿನಾಂಕ : 29–4–2010.

2. ಕುಲಪತಿಗಳು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು, ಇವರ ಪತ್ರ ದಿನಾಂಕ : 21–6–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಅಧಿಸೂಚನೆಯಲ್ಲಿ ದಿನಾಂಕ : 30–05–2010 ರಿಂದ ಜಾರಿಗೆ ಬರುವಂತೆ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗಿರುತ್ತದೆ. ಮೇಲೆ ಓದಲಾದ (2) ರ ಪತ್ರದಲ್ಲಿ ಕುಲಪತಿಗಳು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಇವರು ವಿಶ್ವವಿದ್ಯಾಲಯದ ಶೈಕ್ಷಣಿಕ ಚಟುವಟಿಕೆಗಳು ಮತ್ತು ಆಡಳಿತಾಂಗದ ಕೆಲಸ ಕಾರ್ಯಗಳ ನಿರ್ವಹಣೆಗಾಗಿ ಒಟ್ಟು 367 ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಸೃಜಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಡಿ 91 ಯುಆರ್‌ಸಿ 2010, ಬೆಂಗಳೂರು, ದಿನಾಂಕ: 25 ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು, ಇಲ್ಲಿ 2010–11 ನೇ ಸಾಲಿನಲ್ಲಿ ಈ ಕೆಳಕಂಡ ಒಟ್ಟು 133 ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಸೃಜಿಸಲು ಆದೇಶಿಸಲಾಗಿದೆ.

- ಯುಜಿಸಿ ವೇತನ ಪಡೆಯುವ ಬೋಧಕ ಹುದ್ದೆಗಳು : 45 (ನಲವತ್ತೈದು)
- ರಾಜ್ಯ ವೇತನ ಪಡೆಯುವ ಬೋಧಕ ಹುದ್ದೆಗಳು : 26 (ಇಪ್ಪತ್ತಾರು)
- ಯುಜಿಸಿ ವೇತನ ಪಡೆಯುವ ಬೋಧಕೇತರ ಹುದ್ದೆಗಳು : 11 (ಹನ್ನೊಂದು)
- ರಾಜ್ಯ ವೇತನ ಪಡೆಯುವ ಬೋಧಕೇತರ ಹುದ್ದೆಗಳು : 51 (ಐವತ್ತೊಂದು)

133 (ಒಂದು ನೂರ ಮೂವತ್ತಮೂರು)

2. ಮೇಲ್ಕಂಡ ಹುದ್ದೆಗಳನ್ನು ಭರ್ತಿ ಮಾಡುವಾಗ ಜಾರಿಯಲ್ಲಿರುವ ಯುಜಿಸಿ/ರಾಜ್ಯ ಸರ್ಕಾರದ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳನ್ನು ಪಾಲಿಸತಕ್ಕದ್ದು ಹಾಗೂ ಈ ಬಗ್ಗೆ ಸೂಕ್ತ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅತೀ ಶೀಘ್ರದಲ್ಲಿಯೇ ಸಿದ್ದಪಡಿಸಿ ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ : ಆಇ 900 ವೆಚ್ಚ–8 2010, ದಿನಾಂಕ :12–1–2011 ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 355

**ಯು. ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು)

## ಶಿಕ್ಷಣ ಸಚಿವಾಲಯ

**ವಿಷಯ :** ಹಾವೇರಿ ತಾಲ್ಲೂಕು, ಹೊಸರಿತ್ತಿ, ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆಯ ವೆಚ್ಚದ ಮಿತಿಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 110 ಯೋಯೋಕ 2002, ದಿನಾಂಕ 06–05–2003

2) ಸರ್ಕಾರದ ಆದೇಶ ಸಂಖ್ಯೆ: ಇಡಿ: 272 ಯೋಯೋಕ 2006, ದಿನಾಂಕ 14–11–2006

3) ಸರ್ಕಾರದ ಆದೇಶ ಸಂಖ್ಯೆ: ಇಡಿ: 253 ಯೋಯೋಕ 2008, ದಿನಾಂಕ 20–11–2010

4) ಕಾರ್ಯದರ್ಶಿ, ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆ, ಹೊಸರಿತ್ತಿ ರವರ ದಿನಾಂಕ 30–11–2010ರ ಮನವಿ.

**ಪ್ರಸ್ತಾವನೆ :**

ಮೇಲೆ ಓದಲಾದ (4)ರ ಪತ್ರದಲ್ಲಿ ಕಾರ್ಯದರ್ಶಿ, ಗಾಂಧೀ ಗ್ರಾಮೀಣ ಗುರುಕುಲ ವಸತಿಶಾಲೆ, ಹೊಸರಿತ್ತಿ, ಹಾವೇರಿ ತಾಲ್ಲೋಕು, ಹಾವೇರಿ ಇವರು ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಸಲ್ಪಡುತ್ತಿರುವ ಎಲ್ಲಾ ವಸತಿ ಶಾಲೆಗಳ ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚದ ಮಿತಿಯನ್ನು ಪ್ರತಿ ತಿಂಗಳಿಗೆ ರೂ. 500/– ರಿಂದ ರೂ. 650/–ಕ್ಕೆ ಹೆಚ್ಚಿಸಿ ಸಮಾಜ ಕಲ್ಯಾಣ ಇಲಾಖೆಯ ಆದೇಶ ಸಂಖ್ಯೆ: ಸಕ/77/ಸಮನ್ವಯ 2008, ದಿನಾಂಕ 12–08–2008ರಂದು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ ಎಂದು ತಿಳಿಸಿ ಅದರಂತೆ ಹೊಸರಿತ್ತಿ, ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆಗೂ ಭೋಜನಾ ವೆಚ್ಚದ ಮಿತಿಯನ್ನು ರೂ. 500/– ರಿಂದ 650/–ಕ್ಕೆ ಹೆಚ್ಚಿಸುವಂತೆ ಬೇಡಿಕೆ ಸಲ್ಲಿಸಿರುತ್ತಾರೆ. ಉಲ್ಲೇಖ 3ರ ಸರ್ಕಾರಿ ಆದೇಶದಲ್ಲಿ ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆಯನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಶಿಕ್ಷಣ ಇಲಾಖೆಯ ಅಧೀನಕ್ಕೆ ವರ್ಗಾಯಿಸಿ ಆದೇಶಿಸಲಾಗಿದೆ. ಆದ್ದರಿಂದ ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆಗೂ ಸಮಾಜ ಕಲ್ಯಾಣ ಇಲಾಖೆಯು ಹೊರಡಿಸಿರುವ ಸರ್ಕಾರಿ ಆದೇಶದಂತೆ ದಿನಾಂಕ 12–08–2008 ರಿಂದಲೇ ಭೋಜನಾ ವೆಚ್ಚದ ಮಿತಿಯನ್ನು ರೂ. 500/– ರಿಂದ ರೂ. 650/–ಕ್ಕೆ ಪರಿಷ್ಕರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ

**ಸರ್ಕಾರದ ಆದೇಶ ಸಂಖ್ಯೆ: ಇಡಿ 253 ಯೋಯೋಕ 2008, ಬೆಂಗಳೂರು, ದಿನಾಂಕ: 28–01–2011**

**[ಇಡಿ: 04/ಸ್ವೀಮರ (ಯುನಿಕ್) 2011, ದಿನಾಂಕ 28–01–2011]**

ಶಿಕ್ಷಣ ಇಲಾಖೆಯ ಅಧೀನದಲ್ಲಿ ಬರುವ ಹಾವೇರಿ ತಾಲ್ಲೂಕು, ಹೊಸರಿತ್ತಿ ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆಯ ವಿದ್ಯಾರ್ಥಿಗಳ ಭೋಜನಾ ವೆಚ್ಚದ ಮಿತಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ರೂ. 500/– ರಿಂದ 650/–ಕ್ಕೆ ಪರಿಷ್ಕರಿಸಿ ಆದೇಶ

ಹೊರಡಿಸಲಾಗಿದೆ ಸದರಿ ಮೊತ್ತವನ್ನು ಜಿಲ್ಲಾವಲಯ ಲೆಕ್ಕ ಶೀರ್ಷಿಕೆ 2202-02-110-3-56 (ಯೋಜನೇತರ) (ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆ, ಹೊಸರಿತ್ತಿ) ರಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 933 ವೆಚ್ಚ 8/2010, ದಿನಾಂಕ 06-01-2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. ನಂ. 356

## ಸಹಕಾರ ಸಚಿವಾಲಯ

**ವಿಷಯ** : ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಈ ಸಂಸ್ಥೆಗೆ ನೇಮಿಸಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಸಇ 17 ಮುಸೋಸೋ 2006, ದಿನಾಂಕ 24-2-2007
2) ಸರ್ಕಾರದ ಆದೇಶ ಸಂಖ್ಯೆ: ಸಇ 123 ಸಸಂನೋ 2009, ದಿನಾಂಕ 26-7-2010
3) ಆಡಳಿತಾಧಿಕಾರಿಗಳು, ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಇವರ ಪತ್ರಸಂಖ್ಯೆ: ಡಿವಿಎಸ್/ಎಡಿಎಂ/ಸಿಆರ್/1/06-07, ದಿನಾಂಕ 13-12-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ 24-2-2007ರ ಆದೇಶದಲ್ಲಿ, ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಂ 27(ಎ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಹಿರಿಯ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ದಿನಾಂಕ 26-7-2010ರ ಆದೇಶದಲ್ಲಿ, ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಹಿರಿಯ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರನ್ನು ಅಂತಿಮವಾಗಿ ಆಡಳಿತಾಧಿಕಾರಿಯನ್ನಾಗಿ ದಿನಾಂಕ 6-6-2010 ರಿಂದ ಜಾರಿಗೆ ಬರುವಂತೆ ಮತ್ತೆ ಅಂತಿಮವಾಗಿ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ 13-12-2010ರ ಪತ್ರದಲ್ಲಿ, ದೇಶೀಯ ವಿದ್ಯಾಶಾಲಾ ಸಮಿತಿಯ ಕುರಿತು ಸರ್ಕಾರದ ದಿನಾಂಕ 26-7-2010ರ ಆದೇಶದಲ್ಲಿ, ಆಡಳಿತಾಧಿಕಾರಿಗಳ ಅಧಿಕಾರಾವಧಿಯು ದಿನಾಂಕ 5-12-2010ಕ್ಕೆ ಮುಕ್ತಾಯವಾಗಿದ್ದು ಈ ಮಧ್ಯೆ ಶ್ರೀ ಎಸ್. ಸಕ್ರಾನಾಯ್ಕ ಬಿನ್ ಡಾಕ್ಯಾನಾಯ್ಕ ಹಾಗೂ ಇತರೆ ಐದು ಜನ ಉಪನ್ಯಾಸಕರು ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ 27601-27606/2010ನ್ನು ಸಲ್ಲಿಸಿ, ದಿನಾಂಕ 26-7-2010ರ ಸರ್ಕಾರದ ಆದೇಶದ ಸಿಂಧುತ್ವವನ್ನು ಪ್ರಶ್ನಿಸಿರುತ್ತಾರೆ. ಉಚ್ಛ ನ್ಯಾಯಾಲಯವು ದಿನಾಂಕ 26-11-2010 ರಂದು ಮಧ್ಯಂತರ ಆದೇಶ ನೀಡಿ, ದಿನಾಂಕ 5-12-2010 ರಿಂದ ನಾಲ್ಕು ವಾರಗಳ ಅವಧಿಗೆ ಆಡಳಿತಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಲು ಆದೇಶಿಸಿರುತ್ತದೆ. ಉಚ್ಛ ನ್ಯಾಯಾಲಯದ ಆದೇಶ ಆಧರಿಸಿ, ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವಂತೆ ಆಡಳಿತಾಧಿಕಾರಿಗಳು ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 123 ಸಸಂನೋ 2009, ಬೆಂಗಳೂರು, ದಿನಾಂಕ: 20-1-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದೇಶೀಯ ವಿದ್ಯಾ ಶಾಲಾ ಸಮಿತಿ (ರಿ), ಶಿವಮೊಗ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 27601-27606/2010ರ ಮಧ್ಯಂತರ ತೀರ್ಪಿನನ್ವಯ ಉಪ ವಿಭಾಗಾಧಿಕಾರಿಗಳು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ 5-12-2010 ರಿಂದ ನಾಲ್ಕು ವಾರಗಳು ಅಂದರೆ ದಿನಾಂಕ 4-1-2011 ರವರೆಗಿನ ಅವಧಿಗೆ ವಿಸ್ತರಿಸಿ ಆದೇಶಿಸಲಾಗಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಕಡ್ಡಾಯವಾಗಿ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. ನಂ. 357

## ಆರ್ಥಿಕ ಸಚಿವಾಲಯ

## ಸುತ್ತೋಲೆ

ಸಂಖ್ಯೆ: ಆಇ/7/ಸೇನಿಸೇ/2010, ಬೆಂಗಳೂರು, ದಿನಾಂಕ 07–01–2011

**ವಿಷಯ** : ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಹತ್ವದ ಕ್ರೀಡೆಗಳು ಹಾಗೂ ಟೂರ್ನಮೆಂಟುಗಳಲ್ಲಿ ಸರ್ಕಾರಿ ನೌಕರರು ಭಾಗವಹಿಸುವುದಕ್ಕೆ ಅನುಮತಿ ನೀಡುವ ಬಗ್ಗೆ.

***

ದಿನಾಂಕ 16–12–1994 ಎಫ್‌ಡಿ 13 ಎಸ್‌ಆರ್‌ಎಸ್ 1994ನೇ ಕ್ರಮಾಂಕದ ಆದೇಶದ ಕಂಡಿಕೆ 19ರಲ್ಲಿ (ಕ.ನಾ.ಸೇ. ನಿಯಮಾವಳಿಯ ಅನುಬಂಧ 'ಬಿ' ರಲ್ಲಿನ ನಿಯಮ 10 (xix) ರಲ್ಲಿ) "ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಹತ್ವದ ಕ್ರೀಡಾಕೂಟಗಳಲ್ಲಿ ಭಾಗವಹಿಸುವುದಕ್ಕೆ ಮೊದಲು ಸರ್ಕಾರಿ ನೌಕರನು ಸಂಬಂಧಪಟ್ಟ ಆಡಳಿತ ಇಲಾಖೆಯು ಸರ್ಕಾರದ ಕಾರ್ಯದರ್ಶಿಯವರ ಪೂರ್ವಾನುಮತಿ ಪಡೆಯತಕ್ಕದ್ದು" ಎಂದು ಇರುತ್ತದೆ. ಈ ಹಿನ್ನೆಲೆಯಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಹತ್ವದ ಕ್ರೀಡೆಗಳಲ್ಲಿ ಭಾಗವಹಿಸುವುದಕ್ಕೆ ಮುನ್ನ ಕಡ್ಡಾಯವಾಗಿ ಆಯಾ ಆಡಳಿತ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳ ಪೂರ್ವಾನುಮತಿ ಪಡೆಯಬೇಕಾಗುತ್ತದೆ. ಇಂತಹ ಪ್ರಸ್ತಾವನೆಗಳನ್ನು ದಿನಾಂಕ 16–12–1994ರ ಎಫ್‌ಡಿ 13 ಎಸ್‌ಆರ್‌ಎಸ್ 94ರ ಆದೇಶದಲ್ಲಿನ ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಆಡಳಿತ ಇಲಾಖೆಯೇ ಕ್ರೀಡೆಗಳಲ್ಲಿ ಭಾಗವಹಿಸಲು ಅನುಮತಿ ನೀಡಬಹುದು. ಇಂತಹ ಪ್ರಸ್ತಾವನೆಗಳನ್ನು ಆರ್ಥಿಕ ಇಲಾಖೆಗೆ ಕಳುಹಿಸುವ ಅಗತ್ಯವಿಲ್ಲವೆಂದು ತಿಳಿಸಲಾಗಿದೆ. ಪೂರ್ವಾನುಮತಿ ಅಗತ್ಯವಿದ್ದು, ಒಂದು ವೇಳೆ ಕ್ರೀಡೆಯಲ್ಲಿ ಭಾಗವಹಿಸಿದ ಬಳಿಕ ಘಟನೋತ್ತರ ಮಂಜೂರಾತಿ ಕೋರಿಕೆ ಬಂದಲ್ಲಿ ಅಂತಹ ಪ್ರಸ್ತಾವನೆಗಳನ್ನು ಸಹ ಆರ್ಥಿಕ ಇಲಾಖೆಗೆ ಕಳುಹಿಸಿಕೊಡಬಾರದೆಂದು ಆಡಳಿತ ಇಲಾಖೆಯೇ ಸೂಕ್ತ ನಿರ್ಧಾರ ತೆಗೆದುಕೊಳ್ಳಬಹುದೆಂದು ತಿಳಿಸಲಾಗಿದೆ.

**ಪಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇ–1)

ಪಿ.ಆರ್. ನಂ. 358

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಮಂಜುಳ, ಹಿಂದಿನ ಉಪ ನೋಂದಣಾಧಿಕಾರಿಗಳು, ರಾಜಾಜಿನಗರ ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಆರ್.ಡಿ.ಎ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು–ಆದೇಶ.

**ಓದಲಾಗಿದೆ :**

1. ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 25 ಮುನೋಸೇ(2) 2009 ದಿನಾಂಕ: 21–08–2009.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 31 ಎಡಿಇ 2009 ದಿನಾಂಕ: 12–11–2009.
3. ಶ್ರೀಮತಿ ಮಂಜುಳ, ಹಿಂದಿನ ಉಪ ನೋಂದಣಾಧಿಕಾರಿಗಳು, ರಾಜಾಜಿನಗರ ಇವರ ಲಿಖಿತ ಹೇಳಿಕೆ ದಿನಾಂಕ: 13–08–2010.
4. ಸರ್ಕಾರದ ಪತ್ರ ಸಂಖ್ಯೆ: ಕಂಇ 31 ಎಡಿಇ 2009 ದಿನಾಂಕ: 20–10–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಕಂದಾಯ ಇಲಾಖೆಯ ನೋಂದಣಿ ಮತ್ತು ಮುದ್ರಾಂಕ ಶಾಖೆಯಿಂದ ಸ್ವೀಕೃತವಾದ ದಿನಾಂಕ: 21–08–2009ರ ಅನಧಿಕೃತ ಟಿಪ್ಪಣಿಯಲ್ಲಿ, ಶ್ರೀ ಬಿ.ಕೆ. ಸೀತಾರಾಮ ಶಾಸ್ತ್ರಿ ಮತ್ತು ಶ್ರೀಮತಿ ಮಂಜುಳ, ತಹಶೀಲ್ದಾರ್ ಇವರುಗಳು ಈ ಹಿಂದೆ ರಾಜಾಜಿನಗರ ಉಪ ನೋಂದಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿ ಕಛೇರಿಯನ್ನು ದಿನಾಂಕ: 1–4–1996 ರಿಂದ 31–3–1997ರ ಅವಧಿಗೆ ಸಂಬಂಧಿಸಿದಂತೆ, ಕೇಂದ್ರ ಸ್ಥಾನ ಸಹಾಯಕರು, ಜಿಲ್ಲಾ ನೋಂದಣಿ ಕಛೇರಿ, ಬಿಜಾಪುರ ಇವರು ತಪಾಸಣೆ ನಡೆಸಿ ಸಲ್ಲಿಸಿರುವ ವರದಿಯಲ್ಲಿ ಶ್ರೀ ಬಿ.ಕೆ. ಸೀತಾರಾಮ ಶಾಸ್ತ್ರಿ, ಹಿಂದಿನ ಉಪ ನೋಂದಣಾಧಿಕಾರಿ, ರಾಜಾಜಿನಗರ ಇವರು ಮಾರುಕಟ್ಟೆ ಬೆಲೆಗಿಂತ ಕಡಿಮೆ ದರಗಳಿಗೆ 65 ದಸ್ತಾವೇಜುಗಳನ್ನು ನೋಂದಾಯಿಸಿ ಸರ್ಕಾರಕ್ಕೆ ರೂ. 37,94,112/–ಗಳ ರಾಜಸ್ವ ನಷ್ಟವನ್ನುಂಟು ಮಾಡಿರುತ್ತಾರೆ. ಅದೇ ರೀತಿ ಶ್ರೀಮತಿ ಮಂಜುಳ, ರಾಜಾಜಿನಗರ ಉಪ ನೋಂದಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದ್ದು, 21 ದಸ್ತಾವೇಜುಗಳನ್ನು ಮಾರುಕಟ್ಟೆ ಬೆಲೆಗಿಂತ ಕಡಿಮೆ ಬೆಲೆಗೆ ನೋಂದಾಯಿಸಿ ಸರ್ಕಾರಕ್ಕೆ ರೂ. 12,75,561/–ಗಳ ರಾಜಸ್ವ ನಷ್ಟ ಉಂಟು ಮಾಡಿರುತ್ತಾರೆ. ಇವರಿಬ್ಬರೂ ತಹಶೀಲ್ದಾರರಾಗಿದ್ದು, ಕಂದಾಯ ಇಲಾಖೆಯ ಅಧೀನದಲ್ಲಿ ಒಳಪಟ್ಟಿರುತ್ತಾರೆ. ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವಾಗಿದೆ ಎಂದು ನೋಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಶಿಫಾರಸ್ಸು ಮಾಡುತ್ತಾ, ಪ್ರಕರಣಕ್ಕೆ ಸಂಬಂಧಿಸಿದಂತೆ, ಫೆರಿಸ್ಟ್‌ನೊಂದಿಗೆ ಮೂಲ ದಾಖಲೆಗಳನ್ನು ಮತ್ತು ಇಬ್ಬರು ತಹಶೀಲ್ದಾರರ ವಿರುದ್ಧ ಕರಡು ಆರೋಪ ಪಟ್ಟಿಗಳನ್ನು ಪ್ರತ್ಯೇಕವಾಗಿ ತಯಾರಿಸಿ, ನಿಯಮಾನುಸಾರ ತ್ವರಿತವಾಗಿ ಇಲಾಖಾ ವಿಚಾರಣೆ ನಡೆಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಶ್ರೀ ಬಿ.ಕೆ. ಸೀತಾರಾಮಶಾಸ್ತ್ರಿ, ಹಿಂದಿನ ಉಪ ನೋಂದಣಾಧಿಕಾರಿ, ರಾಜಾಜಿನಗರ ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ, ಕಡತ ಸಂಖ್ಯೆ: ಕಂಇ 30 ಎಡಿಇ 2010 ರಲ್ಲಿ ವ್ಯವಹರಿಸಲಾಗುತ್ತಿದೆ. ಪ್ರಸ್ತುತ ಸದರಿ ಕಡತವನ್ನು ಕಾನೂನು ಇಲಾಖೆಯ ಅಭಿಪ್ರಾಯಕ್ಕಾಗಿ ಕಳುಹಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಸರ್ಕಾರವು ದಿನಾಂಕ: 12–11–2009 ರಂದು, ಶ್ರೀಮತಿ ಮಂಜುಳ, ಅಂದಿನ ಉಪ ನೋಂದಣಾಧಿಕಾರಿ, ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಆರ್.ಡಿ.ಇ. ಬೆಂಗಳೂರು ಇವರಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ (ವ. ನಿ ಮತ್ತು ಮೇ) ನಿಯಮ 1957 ರ ನಿಯಮ 11 ರ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀಮತಿ ಮಂಜುಳ, ತಹಶೀಲ್ದಾರ್‌ರವರು ತಮ್ಮ ದಿನಾಂಕ: 18-11-2009 ರಂದು ಅನುಬಂಧ-III ರ ದಾಖಲೆಗಳನ್ನು ಒದಗಿಸುವಂತೆ ಕೋರುತ್ತಾ, ಒಂದು ತಿಂಗಳ ಕಾಲಾವಕಾಶವನ್ನು ನೀಡುವಂತೆ ಕೋರಿದ್ದರ ಮೇರೆಗೆ ಸರ್ಕಾರಕ್ಕೆ ಬಂದು ದಾಖಲೆಗಳನ್ನು ನೋಡಿ ಅವುಗಳನ್ನು ದಿನಾಂಕ: 23-11-2010 ರಂದು ಪಡೆದುಕೊಂಡಿರುತ್ತಾರೆ. ನಂತರ ತಮ್ಮ ದಿನಾಂಕ: 17-05-2010ರ ಪತ್ರದಲ್ಲಿ, ಇನ್ನೂ ಕೆಲವು ದಾಖಲೆಗಳನ್ನು ಪಡೆದುಕೊಂಡ ನಂತರ ಉತ್ತರವನ್ನು ನೀಡಲು ಇನ್ನೂ ಒಂದು ತಿಂಗಳ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ. ಸರ್ಕಾರದ ದಿನಾಂಕ: 22-07-2010ರ ಪತ್ರದಲ್ಲಿ ಸದರಿಯವರು ಕೋರಿರುವ ಕಾಲಾವಕಾಶ ಮುಗಿದಿರುವುದರಿಂದ, ದಿನಾಂಕ: 30-07-2010 ರೊಳಗೆ ಉತ್ತರ ಸಲ್ಲಿಸುವಂತೆ, ಉತ್ತರ ಬಾರದಿದ್ದಲ್ಲಿ ಮುಂದಿನ ಸೂಕ್ತ ಕ್ರಮ ಕೈಗೊಳ್ಳುವುದಾಗಿ ತಿಳಿಸಲಾಗಿರುತ್ತದೆ. ಸದರಿಯವರು ಪುನಃ ತಮ್ಮ ದಿನಾಂಕ: 30-7-2010ರ ಪತ್ರದಲ್ಲಿ ಲಿಖಿತ ಉತ್ತರ ಸಲ್ಲಿಸಲು ಇನ್ನೂ 15 ದಿನಗಳ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ.

ಶ್ರೀಮತಿ ಮಂಜುಳ, ಹಿಂದಿನ ಉಪ ನೋಂದಣಾಧಿಕಾರಿಗಳು, ರಾಜಾಜಿನಗರ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (3) ದಿನಾಂಕ: 13-8-2010/27-8-2010 ರಂತೆ ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ, ಯಾವುದೇ ಸರ್ಕಾರಿ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದಿಲ್ಲವೆಂದು ಹಾಗೂ ನಿರ್ದಿಷ್ಟವಾಗಿ ಯಾವ ಕಾನೂನು (ನೋಂದಣಿ ಕಾನೂನು ಅಥವಾ ಕರ್ನಾಟಕ ಮುದ್ರಾಂಕ ಕಾನೂನು) ಪ್ರಕಾರ ಹಾಗೂ ಯಾವ ಕಲಂ ಅಡಿಯಲ್ಲಿ ಅಥವಾ ಯಾವ ನಿಯಮದ ಅನ್ವಯ ಉಲ್ಲಂಘನೆ ಆಗಿದೆ ಎಂದು ಕಾರಣ ಕೇಳಿ ನೋಟೀಸಿನಲ್ಲಿ ಯಾವುದೇ ಅಂಶ ಇರುವುದಿಲ್ಲ, ಸದರಿ ದಸ್ತಾವೇಜುಗಳು ನೋಂದಣಿ ಆದ 13 ವರ್ಷಗಳ ನಂತರ ತಮ್ಮ ಮೇಲೆ ಆರೋಪ ಹೊರಿಸಿರುವುದು ಅದು ಕಾನೂನಿನಲ್ಲಿರದ ಕ್ರಮವನ್ನು ಏಕೆ ನಿರ್ವಹಿಸಿಲ್ಲ ಎಂದು ಆರೋಪಿಸಿರುವುದು ನ್ಯಾಯಸಮ್ಮತವಾಗಿರುವುದಿಲ್ಲ, ಪಟ್ಟಿಯಲ್ಲಿರುವಂತಹ ದಸ್ತಾವೇಜುಗಳು ಈ ಅವಧಿಯಲ್ಲಿ ತಮಗೆ ತಿಳಿದ ಮಟ್ಟಿಗೆ ರಾಜ್ಯದ ಎಲ್ಲ ನೋಂದಣಿ ಕಛೇರಿಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ನೋಂದಣಿ ಆಗಿದ್ದು ಕೇವಲ ಬೆಂಗಳೂರು ಉತ್ತರ ಹಾಗೂ ದಕ್ಷಿಣ ಮತ್ತು ಆನೇಕಲ್ ನೋಂದಣಿ ಕಛೇರಿಗಳಲ್ಲಿ ಕನಿಷ್ಟ ಹತ್ತು ಸಾವಿರಕ್ಕೆ ಮೇಲ್ಪಟ್ಟು ಇಂತಹ ಜಿಪಿಎ ಪತ್ರಗಳನ್ನು ಈ ಅವಧಿಯಲ್ಲಿ ನೋಂದಣಿ ಆಗಿದ್ದು 21 ದಸ್ತಾವೇಜುಗಳನ್ನು 45(ಎ)(1) ರಡಿಯಲ್ಲಿ ಉಲ್ಲೇಖಿಸಿರುವುದಿಲ್ಲ ಎಂದು ಆರೋಪಿಸಿರುವುದು ನ್ಯಾಯ ಸಮ್ಮತವಾಗಿರುವುದಿಲ್ಲವೆಂದು ತಿಳಿಸುತ್ತಾ, ತಮ್ಮ ವಿರುದ್ಧದ ಆಪಾದನೆಗಳನ್ನು ಅಲ್ಲಗಳೆದು, ಇಲಾಖಾ ವಿಚಾರಣೆಯನ್ನು ಕೈಬಿಟ್ಟು ತಮ್ಮನ್ನು ಆಪಾದನೆ ಮುಕ್ತಳನ್ನಾಗಿ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರದ ದಿನಾಂಕ: 20-10-2010 ರ ಪತ್ರದಲ್ಲಿ, ಆಪಾದಿತರು ಸಲ್ಲಿಸಿರುವ ಲಿಖಿತ ಹೇಳಿಕೆಯ ಪ್ರತಿಯನ್ನು ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ) ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಜಯನಗರ, ಬೆಂಗಳೂರುರವರಿಗೆ ಕಳುಹಿಸಿ, ಸದರಿ ಅಧಿಕಾರಿಯು ತಮ್ಮ ಲಿಖಿತ ಸಮಜಾಯಿಷಿಯಲ್ಲಿ ಆಪಾದನೆಗಳನ್ನು ಅಲ್ಲಗಳೆದಿರುವ ಹಿನ್ನೆಲೆಯಲ್ಲಿ, ಲಿಖಿತ ಹೇಳಿಕೆಯನ್ನು ಪರಿಶೀಲಿಸಿ, ಅಭಿಪ್ರಾಯವನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು ಮತ್ತು ದಿನಾಂಕ: 5-1-2011 ರಂದು ನೆನಪೋಲೆಯನ್ನು ಸಹ ಕಳುಹಿಸಲಾಗಿರುತ್ತದೆ.

ಸರ್ಕಾರದಲ್ಲಿ ಇದುವರೆವಿಗೂ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ) ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಜಯನಗರ, ಬೆಂಗಳೂರು ರವರಿಂದ ಅಭಿಪ್ರಾಯ ಸ್ವೀಕೃತವಾಗಿರುವುದಿಲ್ಲ. ಈಗಾಗಲೇ ವಿಳಂಬವಾಗಿರುವುದರಿಂದ, ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿದುಕೊಂಡು ನಿರ್ಣಯ ತೆಗೆದುಕೊಳ್ಳುವ ಸಲುವಾಗಿ, ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಎ.ಎಲ್. ಪೂಜಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಜೆ.ಐ.ಸಿ. 501, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಆಯುಕ್ತರು, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಸ್ಥಾನಿಕ ಸಹಾಯಕರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 31 ಎಡಿಇ 2009 ಬೆಂಗಳೂರು, ದಿನಾಂಕ: 19-01-2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀಮತಿ ಮಂಜುಳ, ಅಂದಿನ ಉಪ ನೋಂದಣಾಧಿಕಾರಿ ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಆರ್.ಡಿ.ಇ, ಬೆಂಗಳೂರು ಇವರ ವಿರುದ್ಧ ಬೆಂಗಳೂರಿನಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎ.ಎಲ್. ಪೂಜಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಜೆ.ಐ.ಸಿ. 501, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಯುಕ್ತರು, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಸ್ಥಾನಿಕ ಸಹಾಯಕರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007 ದಿನಾಂಕ: 11-4-2008 ರನ್ವಯ ರೂ. 8000/- (ಎಂಟು ಸಾವಿರ ರೂ.ಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/- (ಒಂದು ಸಾವಿರದ ಐನೂರು ರೂ.ಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಅನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 360

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

## ENERGY SECRETARIAT

**Sub:** Enhancement of wind power capacity from 3.00 MW to 8.00 MW in favour of M/s Sun Power India-reg.

Read:
1. Government Order No.: EN 22 NCE 2006 dated: 20-04-2006.
2. Letter No.: KRED/08/SPI (Area 'A') 2010/3530 dated: 16/20-12-2010 received from the Managing Director, Karnataka Renewable Energy Development Limited, Bangalore.
3. M/s Sun Power India letter No. SPI/Energy Dept/Enhancement/01/2010-2011 dated: 01-01-2011.

**Preamble:**

In the Government Order read at (1) above, sanction has been accorded for implementation of 5.00 MW (3+2=5 MW) capacity wind power project at Belgaum District consisting of two areas and are identified as "A" and "B" in favour of M/s Sun Power India.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 3.00 MW (Area 'A' which is the part capacity of 5 MW) to 8.00 MW at Chikkodi village, Chikkodi Taluk, Belgaum District in favour of M/s Sun Power India.

M/s Sun Power India in its letter read at (3) above, has confirmed that out of the proposed enhancement of 3.00 MW to 8.00 MW capacity, wind power energy farm will be developed, commissioned and connected to State Grid before 31.03.2012.

The Proposal has been examined in detail and issued following Orders:-

**Government Order No.: EN 509 NCE 2010, Bangalore, Dated: 28-01-2011**

Government accords approval for enhancement of wind power capacity from 3.00 MW (Area'A' which is the part capacity of 5 MW) to 8.00 MW at Chikkodi village, Chikkodi Taluk, Belgaum district in favour of M/s Sun Power India as detailed below and subject to condition that the project should be commissioned before 31-03-2012:-

| Geographical Area details | Sanctioned Capacity in MW | Capacity proposed for Enhancement | No. of WTG's & rating in kw | Total capacity including proposed enhancement |
|---|---|---|---|---|
| Area 'A'-(3 MW) An East-West oriented non-contiguous ridge is located on the North-West of Chikkodi and is situated at a distance of about 1 km. It is an open scrub and has two peaks and it appears to be non-forest area. The area is covered in the following Geographical co-ordinates:<br>Latitude: $16^0$25'51"-$16^0$26'44" N<br>Longitude: $74^0$33'09"-$74^0$34'49" E<br>Ridge peaks: 761, 763m Amst.<br>Toposheet No.: 47 L/11. | 3 MW | 5 MW | 5 x 1600 KW | 8 MW<br>(3 MW to 8 MW) |

The Government has reserved the right to Cancel/Modify this Order.

The other terms and conditions of the allotment Order read at (1) above shall continue as it is.

By Order and in the name of the Governor of Karnataka

PR No. 361

**Suresh B. Krishnappanavar**
Under Secretary to Government
Energy Department

## HORTICULTURE SECRETARIAT

**Sub:** Release of State share for National Horticulture Mission (NHM) programme during 2010-11 reg.

Read:
1. G.O. No. HCD 32 HPP 2010 dated 16-06-2010 and 29-09-2010.
2. Government of India letter No. 18-89/2009-NHM dated 12-12-2010.
3. Letter of Director of Horticulture No. ಮಿನಿ/ಕರಾತೋಮಿಬ/ವಿನಿ–I/30/2010-11 dated 27-12-2010.

**Preamble:**

An amount of Rs. 2500-00 lakhs has been earmarked in the budget during 2010-11 under the State Sector Scheme namely, "State share for National Horticulture Mission". Head of Account 2401-00-800-2-30 (plan, towards the State share required for the said scheme.

2. An amount of Rs. 1773.79 lakhs towards the matching State share for implementation of National Horticulture Mission programme was released to the Director of Horticulture vide Government Orders read at (1) above as per details furnished below:-

(Rs. In lakhs)

| Object Code | Annual Budget | 1st Instalment | 2nd Instalment | Total released | Balance available |
|---|---|---|---|---|---|
| 059 - Other Expenses | 500.00 | 200.00 | 124.40 | 324.40 | 175.60 |
| 133 Special Development plan | 1000.00 | 551.79 | 248.80 | 800.59 | 199.41 |
| 422 - Special Component plan | 500.00 | 200.00 | 124.40 | 324.40 | 175.60 |
| 423 - Tribal Sub plan | 500.00 | 200.00 | 124.40 | 324.40 | 175.60 |
| **Total** | **2500.00** | **1151.79** | **622.00** | **1773.79** | **726.21** |

3. The Director of Horticulture has informed that Government of India has now released an amount of Rs. 5000.00 lakhs towards the Central share during 2010-11 vide Government of India letter read at (2) above. Hence, he has requested the Government vide his letter read at (3) above to release the matching State share.

4. The proposal of the Director of Horticulture has been examined and hence this order.

**Government Order No. HCD 32 HPP 2010, Bangalore, Dated: 29-01-2011**

Government is pleased to release to the Director of Horticulture an amount of Rs. 726.21 lakhs (Rupees Seven Hundred and Twenty Six lakhs and Twenty One Thousand only) under the Head of Account 2401-00-800-2-30 towards the matching State share for implementation of National Horticulture Mission programme during 2010-11 as below:

(Rs. In lakhs)

| Object Code | Amount Released |
|---|---|
| 059 - Other Expenses | 175.60 |
| 133 - Special Development Plan | 199.41 |
| 422 - Special Component Plan | 175.60 |
| 423 - Tribal Sub Plan | 175.60 |
| **Total** | **726.21** |

2. This order is issued with the concurrence of Finance Department vide its Note No. ಆಇ **322** ವೆ: **4/2010** dated: 24-01-2011.

By Order and in the name of the Governor of Karnataka

PR No. 362

**B.C. Prakash**

Under Secretary to Government

Horticulture Department

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗರಬಾವಿ ಗ್ರಾಮದ ಸ.ನಂ. 16 ರಲ್ಲಿ 2.27 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನ ನಿರ್ಮಾಣಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಮಂಜೂರು ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**

1. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ಮನವಿ ದಿನಾಂಕ: 01–11–2009.
2. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್ಎನ್ಡಿ (ಎನ್) ಸಿಆರ್ 50/09–10, ದಿನಾಂಕ: 05–02–2010.
3. ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕೆಪಿಎಲ್‌ಸಿ/ಸಿಆರ್ 17/10–11, ದಿನಾಂಕ: 07–07–2010.

**ಪ್ರಸ್ತಾವನೆ:**

ಅಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರು ವಿಶೇಷ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ, ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಮನವಿಯಲ್ಲಿ ಸದರಿ ಸಂಘವು ಬೆಂಗಳೂರು ನಗರದ ಕಬ್ಬನ್ ಉದ್ಯಾನವನದಲ್ಲಿ ರಾಜ್ಯ ಸರ್ಕಾರಿ ನೌಕರರ ಭವನವನ್ನು ಹೊಂದಿದ್ದು, ಈ ಭವನದಲ್ಲಿ ರಾಜ್ಯದ ಮೂಲೆ ಮೂಲೆಗಳಿಂದ ಆಗಮಿಸುವ ಸರ್ಕಾರಿ ನೌಕರರಿಗೆ ವಸತಿ ಸೌಲಭ್ಯವನ್ನು ಕಲ್ಪಿಸಲಾಗುತ್ತಿದ್ದು, ಹೆಚ್ಚಿನ ಪ್ರಮಾಣದಲ್ಲಿ ಆಗಮಿಸುವ ನೌಕರರಿಗೆ ಇನ್ನೂ ಹೆಚ್ಚಿನ ವಸತಿ ಸವಲತ್ತುಗಳನ್ನು ಕಲ್ಪಿಸುವ ಸಲುವಾಗಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗರಬಾವಿ ಸ.ನಂ. 16ರಲ್ಲಿ 2.27 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

2. ಈ ಬಗ್ಗೆ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ನಾಗರಬಾವಿ ಗ್ರಾಮದ ಸ.ನಂ. 16ರಲ್ಲಿ ಒಟ್ಟು 5.27 ಎಕರೆ ಜಮೀನಿದ್ದು, ಈ ಪೈಕಿ 3 ಎಕರೆ ಜಮೀನನ್ನು ಶ್ರೀ ವೆಂಕಟಪ್ಪ ಬಿನ್ ಬೈಲಪ್ಪ ಎಂಬುವವರಿಗೆ ಮಂಜೂರಾಗಿದ್ದು, ಈಗ 2.27 ಎಕರೆ ಜಮೀನು ಲಭ್ಯವಿದ್ದು, ಕಂದಾಯ ದಾಖಲೆಯಂತೆ ಸರ್ಕಾರಿ ಗೋಮಾಳ ಎಂದು ವರ್ಗೀಕರಣವಾಗಿರುವುದಾಗಿ ತಿಳಿಸಿರುತ್ತಾರೆ. ಸದರಿ ಜಮೀನಿನ ಮಾರ್ಗಸೂಚಿ ಬೆಲೆ ಹಾಗೂ ಮಾರುಕಟ್ಟೆ ಬೆಲೆ ಎಕರೆಯೊಂದಕ್ಕೆ ರೂ. 150 ಲಕ್ಷ ಇರುವುದಾಗಿ ತಿಳಿಸಿರುತ್ತಾರೆ ಹಾಗೂ ಸದರಿ ಜಮೀನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿರುವುದಾಗಿ ವರದಿ ಮಾಡಿರುತ್ತಾರೆ.

3. ಸದರಿ ಜಮೀನು ಆರ್.ಟಿ.ಸಿ.ಯಂತೆ ಸರ್ಕಾರಿ ಗೋಮಾಳ ಎಂದು ವರ್ಗೀಕರಣಗೊಂಡಿದ್ದು, ಕರ್ನಾಟಕ ಭೂ ಕಂದಾಯ ನಿಯಮಗಳು 1969ರ ನಿಯಮ 97(5)ರನ್ವಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಿಂದ 25 ಕಿ.ಮೀ. ಅಂತರದಲ್ಲಿನ ಗೋಮಾಳ ಜಮೀನನ್ನು ಸರ್ಕಾರದ ಸಾಮಾನ್ಯ ಆದೇಶಕ್ಕೊಳಪಟ್ಟು ವಿಲೇವಾರಿ ಮಾಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರವಿರುತ್ತದೆ.

4. ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 07–07–2010ರ ಪತ್ರದಲ್ಲಿ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗರಬಾವಿ ಗ್ರಾಮದ ಸ.ನಂ. 16ರಲ್ಲಿ ಒಟ್ಟು 5.27 ಎಕರೆ ಜಮೀನಿದ್ದು ಈ ಪೈಕಿ ಶ್ರೀಮತಿ ಮುನಿಯಮ್ಮ ಎಂಬುವವರಿಗೆ ಬೋಗಸ್ ದಾಖಲೆಗಳ ಆಧಾರದ ಮೇಲೆ ಖಾತೆ ಮತ್ತು ಪೋಡಿ ದಾಖಲಾಗಿರುವುದು ಕಂಡುಬಂದಿದ್ದು, ಈ ಬಗ್ಗೆ ಸದರಿ ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 67(2) ರನ್ವಯ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಪ್ರಕರಣ ನಡೆಯುತ್ತಿರುವುದಾಗಿ ಹಾಗೂ ಬಾಕಿ ಉಳಿದ 2.27 ಎಕರೆ ಜಮೀನನ್ನು ಸರ್ಕಾರಿ ನೌಕರರ ಸಂಘಕ್ಕೆ ಸಮುದಾಯ ಭವನ ನಿರ್ಮಿಸಲು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿದಲ್ಲಿ ಸರ್ಕಾರಿ ಜಮೀನನ್ನು ಸಂರಕ್ಷಣೆ ಮಾಡಿದಂತಾಗುತ್ತದೆ ಎಂದು ಅಭಿಪ್ರಾಯ ನೀಡಿರುತ್ತಾರೆ. ಆದ್ದರಿಂದ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗರಬಾವಿ ಗ್ರಾಮದ ಸ.ನಂ. 16ರಲ್ಲಿ 2.27 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನ ನಿರ್ಮಾಣಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ 30 ವರ್ಷಗಳ ಗುತ್ತಿಗೆಗೆ ಪ್ರತಿ ವರ್ಷಕ್ಕೆ ಪ್ರತಿ ಎಕರೆಗೆ ರೂ. 10,000/–ರಂತೆ ಗುತ್ತಿಗೆ ದರ ನಿಗದಿ ಪಡಿಸಿ ಮಂಜೂರು ಮಾಡಲು ಸರ್ಕಾರ ನಿರ್ಣಯಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 151 ಎಲ್‌ಜಿಬಿ 2010 ಬೆಂಗಳೂರು, ದಿನಾಂಕ: 10–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ನಾಗರಬಾವಿ ಗ್ರಾಮದ ಸ.ನಂ. 16ರಲ್ಲಿ 2.27 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಮುದಾಯ ಭವನ ನಿರ್ಮಾಣಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ 30 ವರ್ಷಗಳ ಗುತ್ತಿಗೆಗೆ, ಪ್ರತಿ ವರ್ಷಕ್ಕೆ ಪ್ರತಿ ಎಕರೆಗೆ ರೂ. 10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ) ರಂತೆ ಗುತ್ತಿಗೆ ದರ ಹಾಗೂ ನಿಯಮಾನುಸಾರ ಇತರೆ ಶುಲ್ಕ ನಿಗದಿ ಪಡಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ. ನಿಯಮಾನುಸಾರ ಇತರೆ ಷರತ್ತುಗಳು ಅನ್ವಯವಾಗುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ರಮೇಶ್**

ಸರ್ಕಾರದ ಉಪ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ.ಮಂ ಮತ್ತು ಭೂ ಕಂ.)

ಪಿ.ಆರ್. 363

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಅಭಿವೃದ್ಧಿ ಕಾಮಗಾರಿ ಅನುಷ್ಠಾನಕ್ಕಾಗಿ 2010–11ನೇ ಸಾಲಿನಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2010, ದಿನಾಂಕ: 16–06–2010, 26–08–2010 ಮತ್ತು 21–12–2010.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2010, ದಿನಾಂಕ: 20–01–2011.
3. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ: ಡಿಎಸ್‌ಕೆ/ರಕರ/ಅನುದಾನ/3/2010–11 ದಿನಾಂಕ: 26–07–2010 ಮತ್ತು 17–01–2011.
4. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 151 ಬಿಆರ್‌ಎಸ್ 2010, ದಿನಾಂಕ: 04–12–2010.

**ಪ್ರಸ್ತಾವನೆ:**

ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಕ್ಕಾಗಿ 2010–11ನೇ ಸಾಲಿನಲ್ಲಿ ಒದಗಿಸಲಾಗಿದ್ದ ರೂ. 250.00 ಲಕ್ಷಗಳ ಅನುದಾನದಲ್ಲಿ ಒಟ್ಟು ರೂ. 245.00 ಲಕ್ಷಗಳನ್ನು ಮೇಲೆ ಓದಲಾದ (1) ರಲ್ಲಿರುವ ದಿನಾಂಕ 16–06–2010, 26–08–2010 ಮತ್ತು 21–12–2010ರ ಸರ್ಕಾರದ ಆದೇಶಗಳಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿರವರಿಗೆ ಬಿಡುಗಡೆ ಮಾಡಲಾಗಿದೆ. ಬಾಕಿ ಉಳಿದ ರೂ. 5.00 ಲಕ್ಷಗಳನ್ನು ರಸ್ತೆ ಅಭಿವೃದ್ಧಿ ಕಾಮಗಾರಿಗಳ ಮೌಲ್ಯಮಾಪನಾ ಕಾರ್ಯಕ್ಕಾಗಿ ಮೇಲೆ ಓದಲಾದ (2)ರಲ್ಲಿರುವ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ರವರ ಪತ್ರದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಕ್ಕಾಗಿ 1999–2000 ರಿಂದ 2007–08ನೇ ಸಾಲಿನವರೆವಿಗೆ ರಾಜ್ಯದ 32 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಕೈಗೊಳ್ಳಲಾಗಿರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಒಟ್ಟು ರೂ. 2640.47 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಮೇಲೆ ಓದಲಾದ (1)ರಲ್ಲಿರುವ ಆದೇಶಗಳಲ್ಲಿ 2010–11ನೇ ಸಾಲಿಗೆ ಒದಗಿಸಲಾಗಿದ್ದ ರೂ. 250.00 ಲಕ್ಷಗಳ ಅನುದಾನವನ್ನು ಪೂರ್ಣವಾಗಿ ಬಿಡುಗಡೆಗೊಳಿಸಲಾಗಿದ್ದು, ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಬಾಕಿ ಇರುವ ಹಣ ಬಿಡುಗಡೆಗೊಳಿಸಲು 2010–11ನೇ ಸಾಲಿಗೆ ರೂ. 500.00 ಲಕ್ಷಗಳನ್ನು ಹೆಚ್ಚುವರಿ ಅನುದಾನವಾಗಿ ಮೇಲೆ ಓದಲಾದ (4)ರಲ್ಲಿರುವ ಆದೇಶದಲ್ಲಿ ಒದಗಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ದಿನಾಂಕ: 17–01–2011ರ ಪತ್ರದಲ್ಲಿ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗಾಗಿ 2010–11ನೇ ಸಾಲಿಗೆ ಹೆಚ್ಚುವರಿಯಾಗಿ ಒದಗಿಸಿರುವ ರೂ. 500.00 ಲಕ್ಷಗಳನ್ನು ಈ ಕೆಳಕಂಡ 5 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆಗೊಳಿಸಲು ಆಯುಕ್ತರು ಕಬ್ಬು ಅಭಿವೃದ್ಧಿರವರು ಪ್ರಸ್ತಾಪಿಸಿರುತ್ತಾರೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ, ಹುಕ್ಕೇರಿ, ಬೆಳಗಾಂ ಜಿಲ್ಲೆ | 2000–01<br>2001–02<br>2002–03 | 48.55<br>28.24<br>39.42 |
| 2 | ಜಮಖಂಡಿ ಶುಗರ್ಸ್ ಲಿ., ಜಮಖಂಡಿ, ಬಾಗಲಕೋಟೆ ಜಿಲ್ಲೆ | 2002–03 | 15.19 |
| 3 | ಧೂದ್‌ಗಂಗಾ ಕೃಷ್ಣಾ ಸ.ಸ.ಕಾ. ಚಿಕ್ಕೋಡಿ, ಬೆಳಗಾಂ ಜಿಲ್ಲೆ | 2002–03 | 15.99 |
| 4 | ಮೈಸೂರು ಸಕ್ಕರೆ ಕಾರ್ಖಾನೆ, ಮಂಡ್ಯ ಜಿಲ್ಲೆ | 2002–03 | 2.82 |
| 5 | ಬನ್ನಾರಿ ಅಮ್ಮನ್ ಶುಗರ್ಸ್, ನಂಜನಗೂಡು, ಮೈಸೂರು ಜಿಲ್ಲೆ | 2003–04<br>2004–05<br>2006–07<br>2007–08 | 53.22<br>71.57<br>225.00 |
| | ಒಟ್ಟು | | **500.00** |

ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 108 ಎಸ್‌ಜಿಎಫ್ 2010 ಬೆಂಗಳೂರು, ದಿನಾಂಕ: 20–01–2011.**

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮೇಲೆ ಓದಲಾದ (3)ರಲ್ಲಿರುವ ದಿನಾಂಕ: 17–01–2011ರ ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–800–0–01–ರಸ್ತೆಗಳು 172 (ಯೋಜನೆ) ಅಡಿಯಲ್ಲಿ ಹೆಚ್ಚುವರಿಯಾಗಿ ಒದಗಿಸಿರುವ ರೂ. 500.00 ಲಕ್ಷಗಳನ್ನು (ಐದು ನೂರು ಲಕ್ಷಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ 5 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 151 ಬಿಆರ್‌ಎಸ್ 2010, ದಿನಾಂಕ: 04–12–2010 ಮತ್ತು ಟಿಪ್ಪಣಿ ಸಂಖ್ಯೆ: ಎಫ್‌ಡಿ 1720/ವೆಚ್ಚ–1/2010 ದಿನಾಂಕ: 06–12–2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 364

## HIGHER EDUCATION SECRETARIAT

**Sub:** Issue of terms and conditions of appointment of Prof. P.S. Naik, Registrar, Mysore University, Mysore.

**Read:** 1) Government Notification No. ED 17 UMS 2010 dated 12-07-2010
2) Letter bearing No. ETS/534/1991-92 dated 04-12-2010 from Registrar, Mysore University, Mysore.

**PREAMBLE:**

Prof. P.S. Naik, Professor, Physics Department, Gulbarga University has been appointed as the Registrar, vide Government Notification dated 12-07-2010 read (1) above. The Officer has reported for duty on 13-07-2010 at Mysore University, Mysore. Mysore University has requested to issue terms and conditions of P.S. Naik Registrar appointment vide its letter dated 04-12-2010 read (2) above. The matter has been examined. Hence the following order.

**Government Order No. ED 02 UMV 2011, BANGALORE, Dated 20-01-2011**

Government are pleased to issue the terms and conditions of appointment of Prof. P.S. Naik, Professor, Physics Department Gulbarga University, Gulbarga as the Registrar, Mysore University, Mysore are as appended to this order.

By Order and in the name of the Governor of Karnataka
**B.S. Japali**
Deputy Secretary to Government,
Higher Education Department (Universities)

## APPENDIX TO G.O. ED 02 UMV 2011, DATED 20-01-2011

TERMS AND CONDITIONS OF DEPUTATION OF PROF. P.S. NAIK, PROFESSOR OF PHYSICS, GULBARGA UNIVERSITY AS THE REGISTRAR, MYSORE UNIVERSITY, MYSORE

1. **PERIOD :** The period of service of Prof. P.S. Naik, Professor, Physics Department Gulbarga University is for the period of three years or until further orders whichever is earlier
2. **COMMENCEMENT AND END OF APPOINTMENT :** The appointment shall commence with effect from 13-07-2010 and ends on the date he relinquishes his office, or until further orders whichever is earlier.

3. **PAY AND OTHER ALLOWANCES :** During the period of appointment, Prof. P.S. Naik, shall be entitled to draw his own pay and grade admissible to him in his parent organization. Other allowances, such as DA/HRA/CCA as admissible under rules at the deputed place. He shall not be entitled to any other deputation or Foreign Service allowance.
4. **LEAVE RULES:** He shall be treated as vacation prevented staff governed by the leave rules as applicable to him.
5. **LEAVE SALARY CONTRIBUTION :** The Mysore University, Mysore shall pay Leave salary contribution at the rate of 11% of pay.
6. **PENSION CONTRIBUTION :** Pension contribution shall be paid by the Mysore University, Mysore at the provisional rate at 12.5% on the total basic pay received during the period of deputation.
7. **MEDICAL CONCESSION:** The official shall be entitled to the medical attendance as per the Karnataka Government Servants (Medical Attendance) Rules 1963.
8. **JOINING TIME :** He shall entitled for joining time pay and transfer TA as per rules.
9. He shall be perform the functions of Registrar and attend to all work entrusted to him from time to time by the Vice Chancellor, Mysore University, Mysore.
10. He shall perform his duties diligently and he shall maintain strict secrecy in respect of official information, which he comes to know in the course of his duties.
11. He shall be liable to reimburse to Government all the losses, which the Government may sustain due to misconduct of any sort on his part.

**B.S. Japali**
Deputy Secretary to Government,
Higher Education Department (Universities)

P.R. 369

## ಇಂಧನ ಸಚಿವಾಲಯ

**ವಿಷಯ :** ಆರ್ಥಿಕ ವರ್ಷ 2010–11 ರಲ್ಲಿ ಲಭ್ಯವಿರುವ ಹೆಚ್ಚುವರಿ ಜಲವಿದ್ಯುತ್ತನ್ನು ಹೆಸ್ಕಾಂ, ಜೆಸ್ಕಾಂ ಮತ್ತು ಮೆಸ್ಕಾಂ ಕಂಪನಿಗಳಿಗೆ ಮರುಹಂಚಿಕೆ ಮಾಡುವ ಬಗ್ಗೆ

**ಓದಲಾಗಿದೆ :** ಕೆಇಆರ್‌ಸಿ ಸೂಚನೆ ಫ್ಯಾಕ್ಸ್ ದಿನಾಂಕ 24–11–2010.

**ಪ್ರಸ್ತಾವನೆ:**

ವಿತರಣಾ ಕಂಪನಿಗಳು 2011ನೇ ವರ್ಷದ ಇಆರ್‌ಸಿ ಪ್ರಸ್ತಾವನೆಯನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಸಲ್ಲಿಸಿದಾಗ ಜಲ ವಿದ್ಯುತ್ ಲಭ್ಯತೆಯ ಪ್ರಮಾಣವು 9220 ಮಿ.ಯು. ಗಳೆಂದು ತಿಳಿಸಿರುತ್ತವೆ. ಕೆಇಆರ್‌ಸಿ ರವರ ಅಂದಾಜಿನಂತೆ ಉತ್ತಮ ಮುಂಗಾರಿನ ಒಳಹರಿವನ್ನು ಗಣನೆಗೆ ತೆಗೆದುಕೊಂಡು ಜಲವಿದ್ಯುತ್ ಪ್ರಮಾಣವನ್ನು 10500 ಮಿ.ಯು.ಗಳೆಂದು ಅಂದಾಜಿಸಿರುತ್ತಾರೆ. ಇದರಿಂದಾಗಿ ಹೆಚ್ಚುವರಿ ಲಭ್ಯವಿರುವ ಸುಮಾರು 1300 ಮಿ.ಯು, ಜಲ ವಿದ್ಯುತ್ತನ್ನು ಹೆಸ್ಕಾಂ, ಜೆಸ್ಕಾಂ ಮತ್ತು ಮೆಸ್ಕಾಂ ಕಂಪನಿಗಳಿಗೆ ಕ್ರಮವಾಗಿ 300 ಮಿ.ಯು., 725 ಮಿ.ಯು. ಹಾಗೂ 275 ಮಿ.ಯು. ನಂತೆ ಹೆಚ್ಚುವರಿಯಾಗಿ ಮುಂದಿನ 3 ತಿಂಗಳುಗಳಲ್ಲಿ ಹಂಚಬೇಕೆಂದು ತಿಳಿಸಿರುತ್ತಾರೆ. ಬಾಕಿ ಉಳಿದಿರುವ ಜಲವಿದ್ಯುತ್ತಿನ ಪ್ರಮಾಣವನ್ನು ಬೆಸ್ಕಾಂ ಮತ್ತು ಸೆಸ್ಕ್ ಕಂಪನಿಗಳಿಗೆ ಸಮನಾಗಿ ಹಂಚಬೇಕಾಗಿದೆ. ಕೆಇಆರ್‌ಸಿಯವರು ಹೆಸ್ಕಾಂ, ಜೆಸ್ಕಾಂ ಮತ್ತು ಮೆಸ್ಕಾಂ ಕಂಪನಿಗಳ ವಿದ್ಯುತ್ ಖರೀದಿಯ ಆರ್ಥಿಕ ಹೊರೆಯನ್ನು ಪರಿಗಣಿಸಿ ಈ ನಿರ್ಧಾರವನ್ನು ತೆಗೆದುಕೊಂಡಿರುವುದಾಗಿ ತಿಳಿಸಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 35 ಎನ್‌ಸಿಇ 2011, ಬೆಂಗಳೂರು, ದಿನಾಂಕ 24–1–2011**

2010–11ನೇ ವರ್ಷದಲ್ಲಿ ಹೆಚ್ಚುವರಿ ಲಭ್ಯವಿರುವ ಜಲ ವಿದ್ಯುತ್ತನ್ನು ಹೆಸ್ಕಾಂ, ಜೆಸ್ಕಾಂ ಮತ್ತು ಮೆಸ್ಕಾಂ ಕಂಪನಿಗಳಿಗೆ ಜನವರಿ, ಫೆಬ್ರವರಿ ಮತ್ತು ಮಾರ್ಚ್ 2011 ತಿಂಗಳುಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಲಾಗಿದೆ.

| ವಿತರಣಾ ಕಂಪನಿ | ಪ್ರಸಕ್ತ ಸರಾಸರಿ ಬಳಕೆಯಾಗುತ್ತಿರುವ ಜಲವಿದ್ಯುತ್ತಿನ ಪ್ರಮಾಣ (ಮಿ.ಯು.ಗಳಲ್ಲಿ) | ಹೆಚ್ಚುವರಿಯಾಗಿ ಹಂಚಿಕೆ ಮಾಡಲಾಗಿರುವ ಜಲ ವಿದ್ಯುತ್ ಪ್ರಮಾಣ ತಿಂಗಳೊಂದಕ್ಕೆ (ಮಿ.ಯು) | ಬಿಲ್ಲಿಂಗ್ ಲೆಕ್ಕಾಚಾರಕ್ಕೆ ನಿಗದಿಪಡಿಸಬಹುದಾದ ಜಲ ವಿದ್ಯುತ್ತಿನ ಪ್ರಮಾಣ ತಿಂಗಳೊಂದಕ್ಕೆ (ಮಿ.ಯು.) |
|---|---|---|---|
| ಹೆಸ್ಕಾಂ | 241 | 100 | 341 |
| ಜೆಸ್ಕಾಂ | 181 | 241 | 422 |
| ಮೆಸ್ಕಾಂ | 96 | 90 | 186 |
| ಒಟ್ಟು | 418 | 431 | 949 |

ಜಲ ವಿದ್ಯುತ್ ಪ್ರಮಾಣದ ಮರುಹಂಚಿಕೆ ಬಗ್ಗೆ ಲೆಕ್ಕಾಚಾರ ಮಾಡಿರುವ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ANNEXURE

**Additional Hydro Energy allocation to GESCOM, HESCOM and MESCOM as per KERC directions**

1. Hydro energy generated till December end = 7026 Mu.
2. Balance hydro energy to be generated for 3 months during FY11 as per KERCassessment 10500 – 7026 = 3474 Mu.
3. Monthly hydro energy availability = 3474/3 = 1150 Mu approx.
4. As per KERC additional 1300 MU to be allocated for 3 ESCOMs as follows:-

| ESCOM | Average hydro energy presently consumed/month in MU | Additional hydro energy allocation/month in MU | Total hydro energy to be billed for 3 months in MU |
|---|---|---|---|
| MESCOM | 96 | 90 | 186 |
| HESCOM | 241 | 100 | 341 |
| GESCOM | 181 | 241 | 422 |
| TOTAL | 418 | 431 | 949 |

5. Balance hydro energy of 1150 – 949 = 201 Mu is to be divided among 2 Escoms, BESCOM and CESC 100 Mu each for 3 months.

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 370

### ಇಂಧನ ಸಚಿವಾಲಯ

**ವಿಷಯ :** ಮೆ॥ ದೇವರ್ ಪವರ್ ಲಿಮಿಟೆಡ್ ಇವರ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಶೀರೂರ್‌ಮಠ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಪಿನಾಕಿನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ವರ್ಗಾವಣೆ ಮಾಡಿ, ಯೋಜನೆಯ ಕಾಲವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 505 ಎನ್‌ಸಿಇ 2006 ದಿನಾಂಕ 17–03–2007.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–286/ಶಿರೂರ್‌ಮಠ್/3092 ದಿನಾಂಕ: 02/8.11.2010

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ದೇವರ್ ಪವರ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಶಿರೂರ್‌ಮಠ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿರೂರ್‌ಮಠ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಈ ಯೋಜನೆಯು ಹಂಚಿಕೆಯಾಗಿರುವ ಸ್ಥಳದಲ್ಲಿ ಸ್ಥಳೀಯರಿಂದ ಆಕ್ಷೇಪಣೆ ಇದ್ದುದರಿಂದ ಅನಿವಾರ್ಯವಾಗಿ ಯೋಜನೆಯನ್ನು ಅನುಷ್ಠಾನ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ ಮೆ॥ ದೇವರ್ ಪವರ್ ಲಿಮಿಟೆಡ್ ಹೆಸರಿನಲ್ಲಿಯೇ ಫಂಡ್ ಮೋಬಿಲೈಸ್ ಮಾಡಲು ಕಷ್ಟವಾಗಿರುವ ಹಿನ್ನೆಲೆಯಲ್ಲಿ ಯೋಜನೆಯನ್ನು
ಮೆ॥ ಪಿನಾಕಿನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಹೆಸರಿಗೆ ವರ್ಗಾವಣೆ ಮಾಡಿ, ಸದರಿ ಯೋಜನೆಯ ಕಾಲಾವಕಾಶವನ್ನು ದಿನಾಂಕ: 23.06.2010 ರಿಂದ 22.06.2012 ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 455 ಎನ್‌ಸಿಇ 2010, ಬೆಂಗಳೂರು, ದಿನಾಂಕ 21–01–2011**

ಮೆ॥ ದೇವರ್ ಪವರ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಶಿರೂರ್‌ಮಠ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿರೂರ್‌ಮಠ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಪಿನಾಕಿನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ವರ್ಗಾವಣೆ ಮಾಡಲಾಗಿದೆ ಹಾಗೂ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 23.06.2010 ರಿಂದ 2 ವರ್ಷಗಳ ಅವಧಿಗೆ ಕೆಳಕಂಡ ನಿಬಂಧನೆಗೊಳಪಟ್ಟು ವಿಸ್ತರಿಸಲಾಗಿದೆ.

1. ಮೆ॥ ಪಿನಾಕಿನ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರು ಸರ್ಕಾರದೊಂದಿಗೆ ಈ ಆದೇಶ ಹೊರಡಿಸಿದ 45 ದಿನಗಳೊಳಗಾಗಿ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು.
2. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತಕ್ಕೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು assign ಮಾಡಲಾಗಿದೆ. ಒಂದು ತಿಂಗಳೊಳಗಾಗಿ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು.
3. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 371

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ನರಸಾಪುರ ಗ್ರಾಮದ ಸರ್ವೆ ನಂ. 41 ರಲ್ಲಿರುವ 12.04 ಎಕರೆ ಜಮೀನನ್ನು ಸಮಾಜ ಕಲ್ಯಾಣ ಇಲಾಖೆ ಮತ್ತು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ನೀಡುವುದಕ್ಕಾಗಿ ಸದರಿ ಜಮೀನನ್ನು ಕಂದಾಯ ಇಲಾಖೆಗೆ ಹಿಂದಿರುಗಿಸುವ ಬಗ್ಗೆ

**ಓದಲಾಗಿದೆ :** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇನಿ/ತಾಮಗ/ತಾಂ4/ನರಸಾಪುರಜಮೀನು/115/08–09, ದಿನಾಂಕ: 26–3–2010 ಹಾಗೂ 16–11–2010.

2. ಜಿಲ್ಲಾಧಿಕಾರಿಗಳು, ತುಮಕೂರು ಇವರ ಆದೇಶ ಸಂಖ್ಯೆ: ಎಲ್ಎನ್‌ಡಿ (ಟಿಎಂಕೆ) ಎಸ್ಆರ್/8/09–10, ದಿನಾಂಕ: 7–1–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ನರಸಾಪುರ ಗ್ರಾಮದ ಸರ್ವೆ ನಂ. 41 ರಲ್ಲಿರುವ 12.04 ಎಕರೆ ಜಮೀನಿನಲ್ಲಿ ರೇಷ್ಮೆ ಇಲಾಖೆಗೆ ಸೇರಿದ ಮಾದರಿ ಚಾಕಿ ಸಾಕಾಣಿಕೆ ಕೇಂದ್ರದ ಕಟ್ಟಡವಿದ್ದು, ಸದರಿ ಜಮೀನಿಗೆ ಸಂಬಂಧಿಸಿದ 2007–08ನೇ ಸಾಲಿನ ಪಹಣಿಯಲ್ಲಿ ಇದು ಗೋಮಾಳ ಎಂದು ಮತ್ತು ಕಾಲಂ 12(2) ರಲ್ಲಿ ರೇಷ್ಮೆ ಇಲಾಖೆ ಕಟ್ಟಡ ಇದೆ ಎಂದು ದಾಖಲಿಸಲಾಗಿದೆ ಎಂದು ತಿಳಿಸಿದ್ದು, ಈ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1964 ನಿಯಮ 97(4) ಯಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಭೂಕಂದಾಯ ಕಾಯ್ದೆ 1964ರ ಕಾಲಂ 47 ರಂತೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಾಗಿ 6.19 ಎಕರೆ ಜಮೀನನ್ನು ಮತ್ತು 5 ಎಕರೆ ಜಮೀನನ್ನು ಸರ್ಕಾರಿ ಕೈಗಾರಿಕೆ ತರಬೇತಿ ಶಾಲೆಗಾಗಿ ಉದ್ಯೋಗ ಮತ್ತು ತರಬೇತಿ ಇಲಾಖೆಗಳಿಗೆ ಹಸ್ತಾಂತರಿಸಲು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರು ಆದೇಶ ಹೊರಡಿಸಿರುವುದರಿಂದ ಹಾಗೂ ಸದರಿ ಜಮೀನು ಮತ್ತು ಕಟ್ಟಡದಲ್ಲಿ ಹಾಲಿ ರೇಷ್ಮೆ ಇಲಾಖೆಗೆ ಸಂಬಂಧಿಸಿದ ಯಾವುದೇ ಚಟುವಟಿಕೆ ನಡೆಯುತ್ತಿಲ್ಲವಾದ್ದರಿಂದ ಜಮೀನು ಮತ್ತು ಕಟ್ಟಡವನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸಬಹುದೆಂದು ತಿಳಿಸಿ, ಸಂಬಂಧಪಟ್ಟ ದಾಖಲೆಗಳನ್ನು ಕಳುಹಿಸಿ, ಜಮೀನನ್ನು ಕಂದಾಯ ಇಲಾಖೆಗೆ ಹಿಂದಿರುಗಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗು ರೇಷ್ಮೆ ನಿರ್ದೇಶಕರು ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ನರಸಾಪುರ ಗ್ರಾಮದ ಸರ್ವೆ ನಂ. 41 ರಲ್ಲಿರುವ 12.04 ಎಕರೆ ಜಮೀನಿನಲ್ಲಿ ಹಾಗೂ ಅಲ್ಲಿರುವ ಕಟ್ಟಡದಲ್ಲಿ ರೇಷ್ಮೆ ಇಲಾಖೆಯ ಯಾವುದೇ ಚಟುವಟಿಕೆ ನಡೆಯುತ್ತಿಲ್ಲವೆಂದು ತಿಳಿಸಿರುವುದರಿಂದ ಹಾಗೂ ಸದರಿ ಜಮೀನನ್ನು ಸಮಾಜ ಕಲ್ಯಾಣ ಇಲಾಖೆ ಮತ್ತು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹಸ್ತಾಂತರಿಸಲು ಜಿಲ್ಲಾಧಿಕಾರಿಗಳು ಈಗಾಗಲೇ ಆದೇಶಿಸಿರುವುದರಿಂದ ವಿಷಯವನ್ನು ಪರಿಶೀಲಿಸಿ, ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಜಮೀನು ಹಾಗೂ ಕಟ್ಟಡವನ್ನು ಕಂದಾಯ ಇಲಾಖೆಗೆ ಹಿಂದಿರುಗಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 13 ರೇಯೋವಿ 2010, ಬೆಂಗಳೂರು, ದಿನಾಂಕ: 18–01–2011**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಶಿಫಾರಸ್ಸು ಮಾಡಿರುವಂತೆ ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ನರಸಾಪುರ ಗ್ರಾಮದ ಸರ್ವೆ ನಂ. 41 ರಲ್ಲಿರುವ 12.04 ಎಕರೆ ಜಮೀನನ್ನು ಸಮಾಜ ಕಲ್ಯಾಣ ಇಲಾಖೆ ಮತ್ತು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ನೀಡುವುದಕ್ಕಾಗಿ ಸದರಿ ಜಮೀನನ್ನು ಕಂದಾಯ ಇಲಾಖೆಗೆ ಹಿಂದಿರುಗಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 372

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಸಿಐ/506/ಎಸ್‌ಪಿಐ/2010, ಬೆಂಗಳೂರು ದಿನಾಂಕ: 29-01-2011**

**ವಿಷಯ :** ದಿನಾಂಕ: 12, 13ನೇ ಜನವರಿ 2010 ರವರೆಗೆ ನಡೆಯುವ 5th Vibrant Gujarat Global 2011 Summit ಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಕೈವಾಇ:ಎಇಪಿ/ಎ1/ವಿಜಿಜಿಎಸ್/42/2010-11, ದಿನಾಂಕ: 16-12-2010.

ಸರ್ಕಾರದ ಆದೇಶ ಸಂಖ್ಯೆ: ಸಿಐ 506 ಎಸ್‌ಪಿಐ 2010, ದಿನಾಂಕ: 20.01.2010 ರಂದು ಹೊರಡಿಸಿರುವ ಆದೇಶದ ವಿಷಯದಲ್ಲಿ "ದಿನಾಂಕ: 12, 13ನೇ ಜನವರಿ 2010 ರವರೆಗೆ" ಬದಲಾಗಿ **"ದಿನಾಂಕ: 12, 13ನೇ ಜನವರಿ 2011 ರವರೆಗೆ"** ಹಾಗೂ ಆದೇಶ ಸಂಖ್ಯೆಯಲ್ಲಿ **"ದಿನಾಂಕ: 20.01.2010"** ಬದಲಾಗಿ **"ದಿನಾಂಕ: 20.01.2011"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 373

**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಡಾ॥ ರಶ್ಮಿ ಆರ್. ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಕೆ.ಹೊಸಕೋಟೆ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ, ಇವರನ್ನು ಸರ್ಕಾರಿ ಸೇವೆಯಿಂದ ತೆಗೆಯುವಿಕೆ.

**ಓದಲಾಗಿದೆ :** 1. ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-2/ವಿವ-265/2009-10, ದಿನಾಂಕ: 18-12-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ, (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಪಶುಚಿಕಿತ್ಸಾಲಯ, ಕೆ.ಹೊಸಕೋಟೆ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ, ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಡಾ॥ ರಶ್ಮಿ ಆರ್.ರವರು ಇಲಾಖೆಗೆ ಸೇರುವ ಮುಂಚೆಯೇ M/s Advinces, Bangalore, ಸಂಸ್ಥೆಯು ಕರೆದಿದ್ದ ವಿಜ್ಞಾನಿ ಹುದ್ದೆ ಅರ್ಜಿ ಸಲ್ಲಿಸಿ ಆಯ್ಕೆಯಾಗಿದ್ದು ಸದರಿ ಹುದ್ದೆಯಲ್ಲಿ ದಿನಾಂಕ: 04-01-2010 ಅಥವಾ ನಂತರದ ದಿನಾಂಕದಂದು ಕರ್ತವ್ಯಕ್ಕೆ ಹಾಜರಾಗಲು ದಿನಾಂಕ: 02-01-2010ರಿಂದ ಅನ್ವಯಿಸುವಂತೆ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿದ್ದು, ಅಧಿಕಾರಿಯ ರಾಜೀನಾಮೆಯನ್ನು ಅಂಗೀಕರಿಸುವಂತೆ ಹಾಸನ ಜಿಲ್ಲಾ ಉಪ ನಿರ್ದೇಶಕರು ಕೋರಿರುತ್ತಾರೆಂದು ತಿಳಿಸಿರುತ್ತಾರೆ. ಡಾ॥ ರಶ್ಮಿ ಆರ್., ಪಶುವೈದ್ಯಾಧಿಕಾರಿ, ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆ ಇರುವುದಿಲ್ಲವೆಂದು ಹಾಗೂ ಅವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವೆಂದು ಹಾಸನ ಜಿಲ್ಲಾ ಉಪ ನಿರ್ದೇಶಕರು ದೃಢೀಕರಿಸಿರುತ್ತಾರೆಂದು, ಸದರಿ ಅಧಿಕಾರಿ ದಿನಾಂಕ: 03-09-2009 ರಿಂದ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇಲಾಖೆಗೆ ಸೇರುವ ಪೂರ್ವದಲ್ಲಿ ಬೇರೆ ಹುದ್ದೆಗೆ ನೇಮಕಾತಿ ಬಯಸಿ ಅರ್ಜಿ ಸಲ್ಲಿಸಿ ಇದೀಗ ಸದರಿ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಹಾಗೂ ಖಾಯಂ ಪೂರ್ವ ಸೇವಾ ಸೇವಾವಧಿ ಘೋಷಣೆ ಆಗದಿರುವುದರಿಂದ ಅವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) 1977ರ ನಿಯಮ, 6(1)ರ ಅಡಿ ಸೇವೆಯಿಂದ ತೆಗೆದುಹಾಕುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

2. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಡಾ॥ ರಶ್ಮಿ ಆರ್., ಪಶುವೈದ್ಯಾಧಿಕಾರಿ ಇವರು ದಿನಾಂಕ: 03-09-2009 ರಿಂದ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ. ಇಲಾಖೆಗೆ ಸೇರುವ ಮೊದಲೇ M/s Advinces, Bangalore, ಎಂಬ ಖಾಸಗಿ ಸಂಸ್ಥೆಯ ವಿಜ್ಞಾನಿ ಹುದ್ದೆ ಅರ್ಜಿ ಸಲ್ಲಿಸಿ ಆಯ್ಕೆಯಾಗಿರುವುದರಿಂದ ಆ ಹುದ್ದೆಯಲ್ಲಿ ಹಾಜರಾಗಲು ದಿನಾಂಕ: 02-01-2010 ರಿಂದ ಅನ್ವಯಿಸುವಂತೆ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿ, ರಾಜೀನಾಮೆ ಅಂಗೀಕರಿಸುವಂತೆ ಕೋರಿರುತ್ತಾರೆ. ಸದರಿ ಅಧಿಕಾರಿಯ ಮೇಲೆ ಯಾವುದೇ ಇಲಾಖಾ ವಿಚಾರಣೆ ಇರುವುದಿಲ್ಲ ಹಾಗೂ ಅವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲ. ಅಧಿಕಾರಿಯ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗದಿರುವುದರಿಂದ ಅವರನ್ನು ಸೇವೆಯಿಂದ ತೆಗೆದುಹಾಕುವಂತೆ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ. ಡಾ॥ ರಶ್ಮಿ ಆರ್. ಇವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲದಿರುವುದು ಕಂಡುಬರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಡಾ॥ ರಶ್ಮಿ ಆರ್. ರವರು ಪರೀಕ್ಷಾರ್ಥ ಅವಧಿಯಲ್ಲಿರುವಾಗಲೇ ಇಲಾಖೆ ಬಿಡಲು ಉದ್ದೇಶಿಸಿರುವುದರಿಂದ ಸದರಿಯವರು ಪಶುವೈದ್ಯಾಧಿಕಾರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆ ಅಂಗೀಕರಿಸುವ ಬದಲು ಆಯುಕ್ತರ ಶಿಫಾರಸ್ಸಿನಂತೆ ಅವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವುದು (Discharge) ಸೂಕ್ತವೆಂದು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 02 ಪಸಸೇ 2011, ಬೆಂಗಳೂರು, ದಿನಾಂಕ: 27ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ರಶ್ಮಿ ಆರ್., ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಕೆ.ಹೊಸಕೋಟೆ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ ಇವರು ಪರೀಕ್ಷಾರ್ಥ ಅವಧಿಯಲ್ಲಿರುವಾಗಲೇ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿದ್ದು, ಖಾಯಂ ಪೂರ್ವ

ಸೇವಾವಧಿ ಘೋಷಣೆಯಾಗದಿರುವುದರಿಂದ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರುರವರ ಶಿಫಾರಸ್ಸು ಅನುಸರಿಸಿ ಸದರಿ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ, 6(1) ರನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಿ (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ.ನಾಗರಾಜ**

ಪಿ.ಆರ್. 374

ಪೀಠಾಧಿಕಾರಿ-2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ-ಎ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು, ಇವರ ಪರೀಕ್ಷಾ ಪೂರ್ವಾವಧಿಯನ್ನು ವಿಸ್ತರಿಸಿ ಘೋಷಣೆ ಮಾಡುವ ಬಗ್ಗೆ.

**ಓದಲಾಗಿದೆ :**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ-1(8)/ಪಪೂಅ/118/2004-05, ದಿನಾಂಕ: 18-2-2009, 30-12-2009, 30-4-2010.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಅಧಿಕೃತ ಜ್ಞಾಪನ ಸಂಖ್ಯೆ: ಸಿ-1(8)ಪಪೂಅ/118/2004-05, ದಿನಾಂಕ: 7-3-2005.
3. ಸರ್ಕಾರಿ ಆದೇಶ ಸಂಖ್ಯೆ: ವಾಕೈ 92 ರೇಇವಿ 2009, ದಿ: 20-11-2010.

**ಪ್ರಸ್ತಾವನೆ:**

ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು ಇವರು ದಿನಾಂಕ: 26-2-1979 ರಂದು ರೇಷ್ಮೆ ಪ್ರದರ್ಶಕರ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಪರಿವೀಕ್ಷಣಾ ಅವಧಿಯಲ್ಲಿ ಈ ಕೆಳಗಿನ ಅವಧಿಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ.

| | | |
|---|---|---|
| 01 | ದಿ: 4-7-1983 ರಿಂದ 19-7-1983 | 16 ದಿನಗಳು |
| 02. | ದಿ: 5-8-1983 ರಿಂದ 11-12-1983 | 129 ದಿನಗಳು |
| 03. | ದಿ: 12-12-83 ರಿಂದ 26-12-1983 | 15 ದಿನಗಳು |
| 04. | ದಿ: 26-1-1984 ರಿಂದ 9-2-1984 | 15 ದಿನಗಳು |
| 05. | ದಿ: 10-2-1984 ರಿಂದ 4-5-1984 | 85 ದಿನಗಳು |
| 06. | ದಿ: 5-5-1984 ರಿಂದ 15-6-1984 | 42 ದಿನಗಳು |
| 07. | ದಿ: 29-8-1984 ರಿಂದ 21-07-1989 | 1788 ದಿನಗಳು |
| 08. | ದಿ: 23-6-1991 ರಿಂದ 11-8-1991 | 50 ದಿನಗಳು |
| 09. | ದಿ: 15-8-1991 ರಿಂದ 5-1-1992 | 144 ದಿನಗಳು |
| 10. | ದಿ: 1-3-1992 ರಿಂದ 5-10-1993 | 584 ದಿನಗಳು |

ಇವರು ನಿಗದಿತ ಅವಧಿಯಲ್ಲಿ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡು ಕರ್ತವ್ಯ ನಿರ್ವಹಿಸಿದ್ದಲ್ಲಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 25-02-1981 ಕ್ಕೆ ಘೋಷಣೆ ಮಾಡಬೇಕಾಗಿತ್ತು. ಆದರೆ, ಈ ಅವಧಿಯಲ್ಲಿ ಅವರು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುವುದಿಲ್ಲ ಹಾಗೂ ಈ ನೌಕರರು ಪರಿವೀಕ್ಷಣಾ ಅವಧಿಯಲ್ಲಿರುವಾಗಲೇ ಮೇಲೆ ಹೇಳಿರುವ ಅವಧಿಗೆ ಗೈರು ಹಾಜರಾಗಿದ್ದು, ಇಲಾಖಾ ಪರೀಕ್ಷೆಯನ್ನು ದಿ: 13-03-1997 ರಂದು ಪಾಸು ಮಾಡಿಕೊಂಡಿರುತ್ತಾರೆ. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅಧಿಕೃತ ಜ್ಞಾಪನದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(ii) ರನ್ವಯ ದಿನಾಂಕ: 26-2-1981 ರಿಂದ 25-02-1982ರವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ. ಮೇಲೆ ಓದಲಾದ ಕ್ರಮಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ನೌಕರರ ಅನಧಿಕೃತ ಗೈರು ಹಾಜರಿಯನ್ನು ಕರ್ತವ್ಯವಲ್ಲದ ಅವಧಿ (DIES NON) ಯೆಂದು ಪರಿಗಣಿಸಿ, ಆದೇಶಿಸಿದೆ. ನೌಕರರು ನಿಗದಿತ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡಿರುವುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 92 ರೇಇವಿ 2010, ಬೆಂಗಳೂರು, ದಿನಾಂಕ: 28-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿನ ಶ್ರೀ ಡಿ.ಬಿ. ಕಾಂತರಾಜು, ರೇಷ್ಮೆ ಪ್ರದರ್ಶಕರು ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 26-02-1982 ರಿಂದ 13-03-1997 ರವರೆಗೆ ಕರ್ನಾಟಕ ನಾಗರೀಕಾ ಸೇವಾ (ಪರಿವೀಕ್ಷಣಾ) ನಿಯಮಗಳು, 1977 ರ ನಿಯಮ 4(i)(ii) ರನ್ವಯ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ನೌಕರರಿಗೆ ಕಾಲ್ಪನಿಕವಾಗಿ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವಿಸ್ತರಿಸಿದ ಅವಧಿಗೆ ಯಾವುದೇ ವೇತನ ಬಾಕಿಯನ್ನು ನೀಡುವಂತಿಲ್ಲವೆಂದು ಆದೇಶಿಸಿದೆ. ಈ ವಿಷಯದಲ್ಲಿ ಮೇಲ್ಕಂಡ ನಿಯಮಗಳ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 375

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ